ಕನ್ನಡ ವಿಶ್ವವಿದ್ಯಾಲಯ, ಹಂಪಿ
954.87
RAJ V

# ವಿಜಯನಗರ ಕಾಲದ ಘಟನಾವಳಿ ಸೂಚಿ

ವಿಜಯನಗರ ಸಾಮ್ರಾಜ್ಯವನ್ನಾಳಿದ ಸಂಗಮ, ಸಳುವ ಮತ್ತು ಸುಳುವ ಅರಸುಮನೆತನಗಳ ಕಾಲದಲ್ಲಿ (೧೩೩೬–೧೫೭೦) ನಡೆದ ಅನೇಕ ಮಹತ್ವಪೂರ್ಣ ಘಟನೆಗಳನ್ನು ಒಂದೆಡೆ ಸಂಕಲನ ಮಾಡಿಕೊಡುವುದೇ ಈ ಸೂಚಿಯ ಮುಖ್ಯ ಉದ್ದೇಶ. ಇದನ್ನು ಸಿದ್ಧಪಡಿಸುವಲ್ಲಿ ವಿಜಯನಗರದ ಬಗೆಗೆ ಪ್ರಕಟವಾಗಿರುವ ಶಾಸನ ಸಂಪುಟಗಳ ಮತ್ತು ಗ್ರಂಥಗಳ ಸಹಾಯ ಪಡೆಯಲಾಗಿದೆ. ಅವುಗಳ ಹೆಸರುಗಳನ್ನು 'ಸೂಚಿ'ಯ ಕೊನೆಗೆ ಕೊಡಲಾಗಿದೆ.

೧೩೩೬ ಮೊದಲನೆಯ ಹರಿಹರ ಹಾಗೂ ಅವನ ಸಹೋದರರಿಂದ ಸಂಗಮವಂಶದ ರಾಜ್ಯ ಸ್ಥಾಪನೆ; ಹರಿಹರನು ಕುಂಜರ ಕೋಣ (ಆನೆಗುಂದಿ) ಯಿಂದ ರಾಜ್ಯವಾಳಿದುದು.

— ಮೊದಲನೆಯ ಹರಿಹರನಿಂದ ಬಾರಕೂರಿನಲ್ಲಿ ಕೋಟೆ ನಿರ್ಮಾಣ.

೧೩೩೮ ಹೊಯ್ಸಳ ಮುಮ್ಮಡಿ ವೀರಬಲ್ಲಾಳನಿಂದ ಬಾರಕೂರು ಕೋಟೆಯ ವೀಕ್ಷಣೆ; ಕೋಟೆಯ ಕಾವಲಿಗೆ ಅಂಕೆಯ ನಾಯಕನ ನೇಮಕ.

೧೩೩೯ ವೀರವಿಜಯಪುರದಲ್ಲಿ ಮುಮ್ಮಡಿ ವೀರಬಲ್ಲಾಳ;

— ಮೊದಲನೆಯ ಹರಿಹರನು ಗುತ್ತಿ ಪ್ರದೇಶವನ್ನು ಆಳುತ್ತಿದ್ದುದು.

— ರಾಜನಾರಾಯಣ ಸಂಭುವರಾಯನ ಪಟ್ಟಬಂಧ.

೧೩೪೦ ಮೊದಲನೆಯ ಹರಿಹರ ನೆಲಮಂಗಲ ಪ್ರದೇಶದಲ್ಲಿ;

— ಮೊದಲನೆಯ ಹರಿಹರನ ಅಧಿಕಾರಿ ಚಾಮರಾಜನು ಬಾದಾಮಿಯಲ್ಲಿ ಕೋಟೆ ಕಟ್ಟಿಸಿದ್ದು;

— ವಿರೂಪಾಕ್ಷ ಬಲ್ಲಾಳನ ಯುವರಾಜ ಪಟ್ಟಬಂಧೋತ್ಸವ;

— ಮುಮ್ಮಡಿ ಬಲ್ಲಾಳನು ಉಣ್ಣಾಮಲೈದಲ್ಲಿ ತಂಗಿದ್ದು.

,–೯–೧೩೪೨ ಕಣ್ಣಾನೂರು ಯುದ್ಧ;

— ಮಧುರೆಯ ಸುಲ್ತಾನ ಘಿಯಾಸುದ್ದೀನನಿಂದ ಮುಮ್ಮಡಿ ಬಲ್ಲಾಳನ ಸೋಲು


AKSHARA GRANTHALAYA
ACC.NO.052354

೧೩೪೩ (ಅಗಷ್ಟ.) ... ಬಂಧೋತ್ಸವ.

— ಸಂಗಮವ ... ಕನ ವಿಜಯಸಾಧನೆ.

೧೩೪೬ ನಾಲ್ವಡಿ ಬಲ್ಲಾಳನ ಸಾವು ಮತ್ತು ಹೊಯ್ಸಳರ ಆಳ್ವಿಕೆಯ ಅಂತ್ಯ;

— ಬಲ್ಲಪ್ಪ ದಣ್ಣಾಯಕನು ಮೊದಲನೆಯ ಹರಿಹರನ ಮಗಳನ್ನು ಮದುವೆಯಾದದ್ದು.

— ವಿಜಯನಗರದ ಸೇವೆಯಲ್ಲಿ ಬಲ್ಲಪ್ಪ ದಣ್ಣಾಯಕನು ಪ್ರವೇಶ ಪಡೆದದ್ದು;

— ವಿಜಯೋತ್ಸವ ಅಂಗವಾಗಿ ಸಂಗಮಸಹೋದರರು ಬಲ್ಲಪ್ಪ ದಣ್ಣಾಯಕ ಹಾಗೂ ಇತರರೊಂದಿಗೆ ಶೃಂಗೇರಿಗೆ ದರ್ಶನಕೊಟ್ಟದ್ದು.

೩–೮–೧೩೪೭ ಅಲ್ಲಾವುದ್ದೀನ ಹಸನ್ ಬಹಮನೀ ಶಹನಿಂದ ಬಹಮನೀ ರಾಜ್ಯ ಸ್ಥಾಪನೆ.

೧೩೪೭ ಹರಿಹರನ ಸಹೋದರ ಮಾರಪ್ಪನು ಆರಗರಾಜ್ಯವನ್ನು ಚಂದ್ರಗುತ್ತಿಯಿಂದ ಆಳುತ್ತಿದ್ದುದು.

೧೩೪೭ ಮೊದಲನೆ ಹರಿಹರನ ಮಂತ್ರಿ ಹಡಪದ ಗೌತರಸನು ಮಂಗಳೂರು ರಾಜ್ಯವನ್ನಾಳುತ್ತಿದ್ದುದು.

೧೩೫೦ ಕೊಂಡವೀಡುವಿನ ರೆಡ್ಡಿಕುಲದ ಅನಪೋತನ ಪಟ್ಟಬಂಧೋತ್ಸವ.

೧೩೫೧ ಸಾವಣ್ಣ ಒಡೆಯನು.

೧೩೫೨ ಮೊದಲನೆಯ ಬುಕ್ಕನು ದೋರಸಮುದ್ರದ ಮಂಡಲಾಧಿಪತಿಯಾದದ್ದು.

— ಮೊದಲನೆಯ ಬುಕ್ಕನ ಮಗ ಕುಮಾರ ಕಂಪಣನು ತಿರುವಣ್ಣಾಮಲೈ ಸುತ್ತು ಮುತ್ತಲಿನ ಪ್ರದೇಶವನ್ನು ವಶಪಡಿಸಿಕೊಂಡದ್ದು.

೧೩೫೪ ಚಿಕ್ಕಒಡೆಯ ಅನಂತರಸನು ಪೆನುಗೊಂಡೆ ಕೋಟೆ ಕಟ್ಟಿಸಿದ್ದು.

೧೩೫೫ ಉದಯಗಿರಿಯ ಮಂಡಲಾಧಿಪತಿಯೂ ಮೊದಲನೆಯ ಹರಿಹರನ ಸಹೋದರನೂ ಆದ ಕಂಪಣನ ಮರಣ.

೧೩೫೬ ಮೊದಲನೆಯ ಹರಿಹರನ ಮರಣ; ಮೊದಲನೆಯ ಬುಕ್ಕನ ಪಟ್ಟಬಂಧ;

— ಮೊದಲನೆಯ ಬುಕ್ಕನ ಶೃಂಗೇರಿ ಭೆಟ್ಟಿ;

— ಮೊದಲನೆಯ ಬುಕ್ಕನ ವಿನಂತಿಯ ಮೇರೆಗೆ ವಿದ್ಯಾರಣ್ಯರು ವಾರಣಾಸಿಯಿಂದ ಶೃಂಗೇರಿಗೆ ಮರಳಿ ಬಂದುದು.

ಸುಮಾರು ೧೩೫೬ ಶೃಂಗೇರಿಯಲ್ಲಿ ವಿದ್ಯಾಶಂಕರ ದೇವಾಲಯದ ನಿರ್ಮಾಣ.

೧೧-೨-೧೩೫೮ ಅಲ್ಲಾವುದ್ದೀನ ಹಸನ್ ಬಹಮನಿ ಶಹಾನ ಮರಣ.

೧೩-೨-೧೩೫೮ ಮೊದಲನೆಯ ಮಹಮ್ಮದನು ಬಹಮನಿ ಸಿಂಹಾಸನ ಏರಿದುದು.

೧೩೫೯ ಕೇಶವವರ್ಣಿ 'ಗೊಮ್ಮಟಸಾರ'ಕ್ಕೆ ವಿವರಣಾತ್ಮಕ ಟೀಕು ಬರೆದದ್ದು.

೧೩೬೦ ಸಾಯಣಾಚಾರ್ಯ, ಮಾಧವಾಚಾರ್ಯ ಮೊದಲಾದವರಿಂದ ವೇದಭಾಷ್ಯ ರಚನಾರಂಭ.

ಸುಮಾರು ೧೩೬೦ ಮೊದಲನೆಯ ಮಂಗರಾಜನಿಂದ 'ಖಗೇಂದ್ರಮಣಿದರ್ಪಣ'ದ ರಚನೆ.

೧೩೬೦-೬೫ ಮಹಾ ಪ್ರಧಾನ ಮಲ್ಲೆಯ ದಣ್ಣಾಯಕನು ಬಾರಕೂರು ರಾಜ್ಯ-ವಾಳುತ್ತಿದ್ದುದು.

೧೩೬೨ ಕೊಂಡವೀಡುವಿನ ಅನಪೋತನ ಮರಣ ಮತ್ತು ಅನವೇಮನ ಸಿಂಹಾಸನಾರೋಹಣ.

೧೩೬೨ (ಅಕ್ಟೋಬರ್ - ಡಿಸೆಂಬರ್) ಕುಮಾರ ಕಂಪಣನು ಸಂಭುವರಾಯನ ಪ್ರದೇಶವನ್ನು ವಶಪಡಿಸಿಕೊಂಡುದು; ಮತ್ತು ಸೋವಣ್ಣ ದಂಡ ನಾಯಕನ ಮಗನಾದ ಗಂಡರಗೂಳಿ ಮಾರಯ್ಯ ನಾಯಕನು ರಾಜ ನಾರಾಯಣ ಸಂಭುವರಾಯನನ್ನು ಸೆರೆಹಿಡಿದದ್ದು; ಚಿಂಗಲ್‌ಪುಟ್, ಉತ್ತರ ಅರ್ಕಾಟ್ ಹಾಗೂ ದಕ್ಷಿಣ ಅರ್ಕಾಟ್‌ದ ಕೆಲವು ಪ್ರದೇಶಗಳನ್ನು ವಿಜಯನಗರ ಪ್ರದೇಶಕ್ಕೆ ಸೇರ್ಪಡಿಸಿದ್ದು.

೧೩೬೩ ರಾಜನಾರಾಯಣ ಸಂಭುವರಾಯನ ಮೇಲೆ ಕಂಪಣನು ಸಾಧಿಸಿದ ವಿಜಯದ ಸ್ಮಾರಕವಾಗಿ ಗಂಡರಗೂಳಿ ಮಾರಯ್ಯನಾಯಕನು ಅಣ್ಣಾಮಂಗಲಪಟ್ರಿವಿನಲ್ಲಿರುವ ಕುಳಿಂದೈಯಾಂಡಾರ್ ದೇವಾಲಯದ ಎರಡನೆಯ ಪ್ರಾಕಾರದಲ್ಲಿ ಗೋಪುರವನ್ನು ಕಟ್ಟಿಸಿದುದು.

೧೩೬೫ ಅಭಿನವಶ್ರುತಮುನಿಯಿಂದ 'ಸಜ್ಜನಚಿತ್ತವಲ್ಲಭ'ವೆಂಬ ಟೀಕುವಿನ ರಚನೆ.

೧೩೬೬ ಕುಮಾರಕಂಪಣ ಕೊಂಗು ಪ್ರದೇಶವನ್ನು ಗೆದ್ದುದು:

೧೩೬೬ ಮೊದಲನೆಯ ಹರಿಹರನ ಸಹೋದರ ಮಾರಪ್ಪನಿಂದ ಗೋವೆಯ ಮೇಲೆ ದಾಳಿ ಹಾಗೂ ಮುಸ್ಲಿಮರಿಂದ ಅದನ್ನು ವಶಪಡಿಸಿಕೊಂಡದ್ದು.

೧೩೬೬–೬೭ ರಾಯಚೂರ ದುಆಬ ಸ್ವಾಧೀನಕ್ಕಾಗಿ ಮೊದಲನೆಯ ಮುಹಮ್ಮದ ಶಹಾ ಹಾಗೂ ಮೊದಲನೆಯ ಬುಕ್ಕರ ನಡುವೆ ನಡೆದ ಕದನ.

೧೩೬೭ ಗುಲ್ಬರ್ಗಾದ ಜುಮ್ಮಾ ಮಸೀದೆಯ ನಿರ್ಮಾಣಕಾರ್ಯ ಮುಕ್ತಾಯ ಗೊಂಡದ್ದು.

೧೩೬೮ ಮೊದಲನೆಯ ಬುಕ್ಕರಾಯನು ಜೈನ ಮತ್ತು ಶ್ರೀವೈಷ್ಣವರ ನಡುವಿನ ಕಲಹವನ್ನು ನಿವಾರಿಸಿ. ಧಾರ್ಮಿಕ ಶಾಂತಿ ಸ್ಥಾಪಿಸಿದುದು.

ಸುಮಾರು ೧೩೬೯ ಭೀಮಕವಿಯಿಂದ 'ಬಸವಪುರಾಣ' ರಚನೆಗೊಂಡುದು.

೧೩೭೧ (ಎಪ್ರೀಲ್–ಮೇ) ಕುಮಾರಕಂಪಣನು ಮಧುರೆಯ ಸುಲ್ತಾನ ಫಕ್ರುದ್ದೀನ ಮುಬಾರಕ್ ಶಹಾನನ್ನು ಸೋಲಿಸಿ ಮಧುರೆಯನ್ನುವಶಪಡಿಸಿಕೊಂಡದ್ದು.

೧೩೭೧ ವಿಜಯನಗರದ ಗೋಪಣಾರ್ಯನು ಶ್ರೀರಂಗಂ ವಶಪಡಿಸಿಕೊಂಡದ್ದು:

— ಶ್ರೀರಂಗಂದಲ್ಲಿ ರಂಗನಾಥನ ಮೂರ್ತಿಯನ್ನೂ, ಚಿದಂಬರಂದಲ್ಲಿ ತಿಲ್ಲಾಯ್ ಗೋವಿಂದರಾಜನ ಮೂರ್ತಿಯನ್ನೂ ಪುನಃ ಪ್ರತಿಷ್ಠಾಪಿಸಿದ್ದು

— ವೇದಾಂತದೇಶಿಕರ ಮರಣ.

೧೩೭೪ ಚೀನಾದ ಮಿಂಗ್ ದೊರೆ ತಾಯ್‌ತ್ಸುವಿನ ಆಸ್ಥಾನಕ್ಕೆ ಮೊದಲನೆಯ ಬುಕ್ಕನ ರಾಯಭಾರಿಯ ಭೆಟ್ಟಿ.

೧೩೭೪ (ಅಕ್ಟೋಬರ್–ಡಿಸೆಂಬರ್) ಕುಮಾರ ಕಂಪಣನ ಮರಣ

೧೩೭೫ ಶೃಂಗೇರಿಯಲ್ಲಿ ವಿದ್ಯಾತೀರ್ಥರ ದೇಹಾಂತ;

— ವಿದ್ಯಾರಣ್ಯರು ಶೃಂಗೇರಿ ಮಠಾಧೀಶರಾದುದು;

— ಮೊದಲನೆಯ ಮುಹಮ್ಮದ ಶಹಾನ ಮರಣ ಹಾಗೂ ಬಹಮನಿ ಸಿಂಹಾಸನಕ್ಕೆ ಮುಜಾಹಿದ್ ಶಹಾ ಬಂದುದು.

೧೩೭೭ ಮೊದಲನೆಯ ಬುಕ್ಕನ ಮರಣ ಹಾಗೂ ವಿಜಯನಗರ ಸಿಂಹಾಸನವನ್ನು ಇಮ್ಮಡಿ ಹರಿಹರ ಏರಿದುದು.

೧೩೭೭ ಬಾರಕೂರು ರಾಜ್ಯಕ್ಕೆ ಬೊಮ್ಮರಸೆ ಒಡೆಯನನ್ನು ಹಾಗೂ ಮಂಗಳೂರು ರಾಜ್ಯಕ್ಕೆ ಪಂಡರಿದೇವನನ್ನು ಮಂಡಲಾಧಿಪತಿಗಳೆಂದು ನೇಮಿಸಿದ್ದು;

— ಸಾಯಣಾಚಾರ್ಯನ ಮರಣ.

೧೬-೪-೧೩೭೮ ಮುಜಾಹಿದ್‌ಶಹಾನ ಕೊಲೆ.

೨೧-೫-೧೩೭೮ ಇಮ್ಮಡಿ ಮುಹಮ್ಮದಶಹ ಬಹಮನಿ ಸಿಂಹಾಸನವನ್ನೇರಿದುದು.

೧೩೭೮ ಇಮ್ಮಡಿ ಹರಿಹರನ ಮಗ ಮೊದಲನೆಯ ದೇವರಾಯನನ್ನು ಉದಯಗಿರಿ ರಾಜ್ಯಕ್ಕೆ ಮಂಡಲಾಧಿಪತಿಯೆಂದು ನೇಮಿಸಿದ್ದು.

೧೩೭೯ ಮಾದರಸನನ್ನು ಮಂಗಳೂರು ರಾಜ್ಯಕ್ಕೆ ಮಂಡಲೇಶ್ವರನೆಂದು ನೇಮಿಸಿದ್ದು.

೧೩೮೦ ಬಾರಕೂರುವಿನಲ್ಲಿ ಭೈರಸನಾಯಕನಿಂದ ದಂಗೆ; ಅದನ್ನು ಇಮ್ಮಡಿ ಹರಿಹರನ ಮಗ ಇಮ್ಮಡಿ ಬುಕ್ಕನು ಹತ್ತಿಕ್ಕಿದ್ದು;

— ಆದವಾನಿ ಬಹಮನೀಯರಿಗೆ ವಶವಾದುದು ಹಾಗೂ ಮಲ್ಲಪ್ಪ ಒಡೆಯನ ಮಗ ಚನ್ನಪ್ಪನು ಅದನ್ನು ಪುನಃ ಗೆದ್ದುದು;

— ವೇದಭಾಷ್ಯದ ಮುಕ್ತಾಯ.

ಸುಮಾರು ೧೩೮೧ ಇಮ್ಮಡಿ ಹರಿಹರನ ಮಂತ್ರಿ ವೀರ ವಸಂತ ಮಾಧವರಾಯನು ಗೋವೆಯನ್ನು ವಶಪಡಿಸಿಕೊಂಡುದು.

— ಇಮ್ಮಡಿ ಹರಿಹರನ ಮಗ ಚಿಕ್ಕರಾಯನು ಆರಗ ರಾಜ್ಯವಾಳುತ್ತಿದ್ದುದು.

೧೩೮೨ ಬಾರಕೂರು ರಾಜ್ಯಕ್ಕೆ ಜಕ್ಕನ ಒಡೆಯನು ಮಂಡಲೇಶ್ವರನಾಗಿ ನೇಮಕಗೊಂಡುದು,

೧೩೮೨-೮೫ ಇಮ್ಮಡಿ ಹರಿಹರನು ಶ್ರೀಶೈಲ ಮತ್ತು ತ್ರಿಪುರಾಂತಕಗಳನ್ನು ವಶಪಡಿಸಿಕೊಂಡದ್ದು.

೧೩೮೩ ಕುಮಾರಕಂಪ (ಇಮ್ಮಡಿ ಹರಿಹರನ ಮಗ)ನು ಆನೆಗೊಂದಿಯ ದಾರಿಯಲ್ಲಿ ತುಂಗಭದ್ರಾ ನದಿಯನ್ನು ದಾಟಲು ಹಾಯ್ಗಡ ಕಟ್ಟಿಸಿದ್ದು;

— ಕುಮಾರಗಿರಿರೆಡ್ಡಿಯು ಕೊಂಡವೀಡು ಸಿಂಹಾಸನವನ್ನೇರಿದುದು.

ಸುಮಾರು ೧೩೮೪ 'ಹರವಿಲಾಸಮು' ಗ್ರಂಥದ ಕರ್ತೃ ಶ್ರೀನಾಥನ ಜನನ.

೧೩೮೪ ಕೋಥಕುಂಡದಲ್ಲಿ ಬಹಮನಿ ಸೈನ್ಯದ ಪರಾಜಯ;

— ಕೋಥಕುಂಡ ಯುದ್ಧದಲ್ಲಿ ಇಮ್ಮಡಿ ಹರಿಹರನ ಮಾವ ಸಾಳುವ ರಾಮದೇವ ಮಡಿದುದು.

೧೩೮೭ ಇರುಗಪ್ಪ ದಂಡನಾಯಕನು ತಿರುಪರುತ್ತಿಕುನ್ರುಂನಲ್ಲಿಯ ತ್ರೈಲೋಕ್ಯ-ನಾಥ ಬಸದಿಯಲ್ಲಿ ಸಂಗೀತ ಮಂಟಪ ಕಟ್ಟಿಸಿದ್ದು.

೧೩೮೮ ಇರುಗಪ್ಪನಾಯಕನಿಂದ ವಿಜಯನಗರದಲ್ಲಿ ಕುಂಥುನಾಥ ಬಸದಿಯ ನಿರ್ಮಾಣ; (ಇದನ್ನು ಈಗ ಗಾಣಗಿತ್ತಿ ಶಿವಾಲಯವೆಂದು ಕರೆಯುವರು)

— ಇಮ್ಮಡಿ ಹರಿಹರನು ಅದ್ದಂಕಿ ಮತ್ತು ಮೋಟುಪಲ್ಲಿಯವರೆಗಿನ ಕರಾವಳಿ ಪ್ರದೇಶವನ್ನು ವಶಪಡಿಸಿಕೊಂಡುದು;

— ಕುಮಾರಗಿರಿರೆಡ್ಡಿ ಹಾಗೂ ಇಮ್ಮಡಿ ಹರಿಹರರ ನಡುವೆ ಒಪ್ಪಂದ;

— ಕಾಟಯವೇಮನ ಮಗ ಕಾಟಪ್ರಭು, ಇಮ್ಮಡಿ ಹರಿಹರನ ಮಗಳನ್ನು ಮದುವೆಯಾದುದು.

— ಇಮ್ಮಡಿ ಹರಿಹರನ ಮಗ ಇಮ್ಮಡಿ ವಿರೂಪಾಕ್ಷನು ತಂಡೀರ, ಚೋಳ ಮತ್ತು ಪಾಂಡ್ಯ ನಾಡುಗಳಲ್ಲಿ ಎದ್ದ ದಂಗೆಗಳನ್ನು ಹತ್ತಿಕ್ಕಿದುದು;

— ಮಂಗಳೂರು ರಾಜ್ಯಕ್ಕೆ ವೀರಚಂದರಸ ಒಡೆಯನನ್ನು ಮಂಡಲೇಶ್ವರ ನೆಂದು ನೇಮಿಸಿದುದು.

೧೩೮೫–೮೬ ಇಮ್ಮಡಿ ವಿರೂಪಾಕ್ಷನು ಸಿಂಹಳವನ್ನು ವಶಪಡಿಸಿಕೊಂಡದ್ದು.

೧೩೮೬ ವಿದ್ಯಾರಣ್ಯರ ದೇಹಾಂತ;

— ಬಾರಕೂರು ರಾಜ್ಯಕ್ಕೆ ಮಲ್ಲಪ್ಪ ಒಡೆಯನನ್ನು ಮಂಡಲೇಶ್ವರನೆಂದು ನೇಮಿಸಿದ್ದು;

— ಇಮ್ಮಡಿ ಬುಕ್ಕನು ಎರಡನೇ ಹರಿಹರನ ಸಮ್ಮತಿ ಪಡೆದು ವಿದ್ಯಾಶಂಕರ ದೇವರಿಗೆ ದತ್ತಿ ಬಿಟ್ಟದ್ದು.

೧೩೯೦ ದಂಡನಾಥ ಗುಂಡ ಹಾಗೂ ಮೊದಲನೆಯ ದೇವರಾಯರ ನೇತೃತ್ವದಲ್ಲಿ ವಿಜಯನಗರ ಸೈನ್ಯವು ತೆಲಂಗಾಣ ಪ್ರದೇಶದ ಮೇಲೆ ದಂಡೆತ್ತಿ ಹೋದುದು; ದೇವರಾಯನು ಆಲಂಪುರದಲ್ಲಿ ತಂಗಿದುದು.

೧೩೯೦–೯೧ ಡೆಕ್ಕನ್ ಮತ್ತು ದಕ್ಷಿಣ ಭಾರತದಲ್ಲಿ ಭೀಕರ ಬರಗಾಲ.

೧೩೯೧ ಚೌಲ್, ದಾಭೋಲ್ ಹಾಗೂ ಖಾರೆ ಪಟ್ಟಣಗಳನ್ನು ವಿಜಯನಗರ ಸೈನ್ಯ ವಶಪಡಿಸಿಕೊಂಡುದು.

೧೩೯೩ ತೆಲಂಗಾಣದಲ್ಲಿ ದಂಡನಾಥ ಗುಂಡನು ಮೊದಲನೇ ಅನಪೋತನಿಂದ ಸೋಲನ್ನು ಅನುಭವಿಸಿದ್ದು.

೧೩೯೪ ಇರುಗಪ್ಪ ದಂಡನಾಯಕನು ಕುಣಿಗಲ್ಲಕೆರೆಗೆ ತೂಬು ಕಟ್ಟಿದುದು,

೧೩೯೭ ಇಮ್ಮಡಿ ಹರಿಹರನ ರಾಣಿ ಬುಕ್ಕವ್ವೆ, ಇರುಗಪ್ಪ ದಂಡನಾಯಕನು ರಾಜಧಾನಿಯಲ್ಲಿ ಕಟ್ಟಿಸಿದ ಬಸದಿಗೆ ದತ್ತಿ ಬಿಟ್ಟದ್ದು.

೧೬–೧೧–೧೩೯೭ ತಾಜುದ್ದೀನ್ ಫಿರೋಜನು ಬಹಮನಿ ಸಿಂಹಾಸನವನ್ನಲಂಕರಿಸಿದುದು.

೧೩೯೭ ಇಮ್ಮಡಿ ಬುಕ್ಕನಿಂದ ಪಾನಗಲ್ ಕೋಟೆಯ ಮುತ್ತಿಗೆ

೧೩೯೮ ಅಭಿನವಮಂಗರಾಜನಿಂದ 'ಮಂಗಾಭಿದಾನ' ಗ್ರಂಥ ರಚನೆಗೊಂಡುದು;

— ಇಮ್ಮಡಿ ಬುಕ್ಕನು ಪಾನಗಲ್ ಕೋಟೆಯುನ್ನು ವಶಪಡಿಸಿಕೊಂಡುದು.

೧೩೯೮–೯೯ ಫಿರೋಜಶಹಾ ಮತ್ತು ಇಮ್ಮಡಿ ಹರಿಹರರ ನಡುವೆ ಕದನ.

೧೩೯೯ ಫಿರೋಜಶಹಾನಿಂದ ವಿಜಯನಗರದ ಮೇಲೆ ನಿರರ್ಥಕದಾಳಿ.

ಸುಮಾರು ೧೪೦೦ ಆಯತವರ್ಮನಿಂದ 'ರತ್ನಕರಂಡಕ' ಮತ್ತು ಚಂದ್ರಕೀರ್ತಿಯಿಂದ 'ಪರಮಾಗಮಸಾರ' ಗ್ರಂಥಗಳ ರಚನೆ.

೧೪೦೨–೧೪೦೩ ಕಾವೇರಿಯ ಪ್ರವಾಹದಿಂದಾಗಿ ತಂಜಾವೂರು ಪ್ರದೇಶದ ಬಹು ಭಾಗ ನೀರಲ್ಲಿ.

೧೪೦೨–೦೩ ಕೊಂಡವೀಡುವಿನ ಕುಮಾರಗಿರಿರೆಡ್ಡಿಯ ಸಾವು ಹಾಗೂ ರಾಜ್ಯ ವಿಭಜನೆ,

೩೦-೮–೧೪೦೪ ಇಮ್ಮಡಿ ಹರಿಹರನ ಮರಣ.

೧೪೦೪ ಇಮ್ಮಡಿ ಹರಿಹರನ ಮರಣಾನಂತರ ವಿಜಯನಗರ ಸಿಂಹಾಸನಕ್ಕಾಗಿ ಇಮ್ಮಡಿ ಬುಕ್ಕ ಹಾಗೂ ಇಮ್ಮಡಿ ವಿರೂಪಾಕ್ಷರಲ್ಲಿ ಯಾದವೀಕಲಹ. ಇಮ್ಮಡಿ ಬುಕ್ಕನ ಸೋಲು, ಇಮ್ಮಡಿ ವಿರೂಪಾಕ್ಷನ ಸಿಂಹಾಸನಾರೋಹಣ.

೧೪೦೫ ಇಮ್ಮಡಿ ವಿರೂಪಾಕ್ಷನನ್ನು ತಳ್ಳಿ, ಇಮ್ಮಡಿ ಬುಕ್ಕನ ಸಿಂಹಾಸನಾರೋಹಣ.

೧೪೦೫-೦೬ ಗೋವೆಯ ಬಾಚಪ್ಪ ಒಡೆಯನನ್ನು ಬಾರಕೂರುರಾಜ್ಯ ಹಾಗೂ ಮಂಗಳೂರು ರಾಜ್ಯಗಳಿಗೆ ಮಂಡಲೇಶ್ವರನೆಂದು ನೇಮಿಸಿದ್ದು.

೭-೧೧-೧೪೦೬ ಮೊದಲನೆಯ ದೇವರಾಯ; ವಿಜಯನಗರ ಸಿಂಹಾಸನವನ್ನೇರಿದುದು.

೧೪೦೬ ಪೆರ್ತಾಲ ಪ್ರಸಂಗ ಮತ್ತು ರಾಯಚೂರು ಪ್ರದೇಶವನ್ನು ಬಹಮನಿಯ ಫಿರೋಜಶಹನು ಮುತ್ತಿದುದು:

— ಮುಳುಬಾಗಿಲು ರಾಜ್ಯಕ್ಕೆ ವಿಜಯರಾಜನು ಮಂಡಲೇಶ್ವರನಾದುದು.

೧೪೦೬-೦೭ ಕೊಂಡವೀಡುವಿನ ಮಲ್ಲಾರೆಡ್ಡಿಯು ಉದಯಗಿರಿ ರಾಜ್ಯವನ್ನು ಮುತ್ತಿದುದು ಹಾಗೂ ಪೊತ್ತಪಿನಾಡಂ ಮತ್ತು ಪುಲುಗುಲ ನಾಡುಗಳನ್ನು ವಶಪಡಿಸಿಕೊಂಡುದು.

೧೪೧೧ ಕಾಟಯವೇಮನು 'ಅಹೋಬಿಲಂ' ಸಂದರ್ಶಿಸಿದ್ದು;

— ಬುಲ್ಲಪ್ಪನಿಂದ ಹರಿದ್ರಾನದಿಗೆ ಹಂದರದ ಬಳಿ ಅಣೆಕಟ್ಟಿನ ನಿರ್ಮಾಣ;

— ಮೊದಲನೆಯ ದೇವರಾಯನ ರಾಣಿ ಭೀಮಾದೇವಿಯು ಶ್ರವಣಬೆಳ್ಗೊಳದ ಮಂಗಾಯಿ ಬಸದಿಯಲ್ಲಿ ಶಾಂತಿನಾಥನ ವಿಗ್ರಹವನ್ನು ಪ್ರತಿಷ್ಠಾಪಿಸಿದುದು;

— ಸಂಗಮವಂಶದ ರಾಜಕುಮಾರ ದೇವರಾಜನಿಂದ 'ಸೊಬಗಿನಸೋನೆ' ಕೃತಿ ರಚನೆ,

— ಮೊದಲನೆಯ ದೇವರಾಯನು ತುಂಗಭದ್ರಾ ನದಿಗೆ ಅಣೆಕಟ್ಟು ಕಟ್ಟಿ, ರಾಜಧಾನಿಗೆ ನೀರಿನ ಸರಬರಾಜು ಮಾಡಿದ್ದು.

೧೪೧೧ ಮಹಮ್ಮದ ಗವಾನನ ಜನನ.

೧೪೧೨ ಮೊದಲನೆ ದೇವರಾಯನು ಕೊಂಡವೀಡು ರಾಜ್ಯವನ್ನು ಹೊಕ್ಕು ಗುಂಟೂರ್ ಪ್ರದೇಶವನ್ನು ವಶಪಡಿಸಿಕೊಂಡಿದ್ದು.

೧೪೧೩ ಮೊದಲನೆಯ ದೇವರಾಯನು ಪೊತ್ತಪಿನಾಡು ಹಾಗೂ ಪುಲುಗುಲ ನಾಡುಗಳನ್ನು ಪುನಃ ವಶಪಡಿಸಿಕೊಂಡದ್ದು.

೧೪೧೫ ಗುಂಡುಕೊಲನು ಯುದ್ಧದಲ್ಲಿ ಕಾಟಯವೇಮನು ಕೊಪ್ಪನುಲ್ಲುವಿನ ಗಜರಾವು ತಿಪ್ಪನ ಕೈಯಲ್ಲಿ ಪರಾಭವಹೊಂದಿ ಸಾವನ್ನಪ್ಪಿದ್ದು.

೧೪೧೬ ಫಿರೋಜಶಹಾ ಹಾಗೂ ಕೊಂಡವೀಡುವಿನ ಪೆದಕೊವಂಟಿ ವೇವಂರ ನಡುವೆ ಮೈತ್ರಿ.

೧೪೧೭ ಮೊದಲನೆಯ ದೇವರಾಯನು ಪಾನಗಲ್ಲನ್ನು ವಶಪಡಿಸಿಕೊಂಡದ್ದು;

— ಫಿರೋಜಶಹಾನು ಪಾನಗಲ್ಲನ್ನು ಮುತ್ತಿದುದು; ಬಹಮನೀ ಸೈನ್ಯದ ಸೋಲು.

— ಮೊದಲನೆಯ ದೇವರಾಯನು ಕೊಂಡವೀಡುವಿನ ಕೆಲಪ್ರದೇಶಗಳನ್ನು ವಶಪಡಿಸಿಕೊಂಡದ್ದು.

೧೪೧೮ ಬಹಮನಿಯರಿಗೆ ಎದುರಾಗಿ ವೇಲವಂರು ಮೊದಲನೆಯ ದೇವರಾಯನ ಪಕ್ಷ ಸೇರಿದುದು;

— ಬಹಮನಿಯ ಪ್ರಧಾನಮಂತ್ರಿ ಮೀರ್ ಫಝ್ಲುಲ್ಲಾ ಇಂಜುವಿನ ಕೊಲೆ,

೧೪೧೯ ಪಾನಗಲ್ ಕದನದಲ್ಲಿ ಫಿರೋಜಶಹಾನ ಪರಾಜಯ ಮತ್ತು ಪಲಾಯನ;

— ಅನಪೋತನು ಮೇದಕ್ ಪ್ರದೇಶವನ್ನು ತಿರುಗಿಪಡೆದುದು.

ಸುಮಾರು ೧೪೨೦ ಮೊದಲನೆಯ ದೇವರಾಯನು ಶ್ರವಣಬೆಳಗೊಳದ ಗೊಮ್ಮಟನ ಪೂಜೆಗೆಂದು ದತ್ತಿನೀಡಿದುದು.

೧೪೨೦–೨೧ ಇಟಲಿ ಪ್ರವಾಸಿ, ನಿಕೊಲೊಕಾಂಟಿ ವಿಜಯನಗರದಲ್ಲಿ.

೧೪೨೦ ರಾಚವೇಮನು ಕೊಂಡವೀಡು ಸಿಂಹಾಸನವನ್ನೇರಿದುದು.

೧೪೨೨ ಮೊದಲನೆಯ ದೇವರಾಯನ ಸಾವು ಹಾಗೂ ರಾಮಚಂದ್ರನು ವಿಜಯ ನಗರ ಸಿಂಹಾಸನವನ್ನೇರಿದುದು.

೧೪೨೨ ರಾಮಚಂದ್ರನ ಸಾವು ಮತ್ತು ವೀರವಿಜಯನು ವಿಜಯನಗರ ಸಿಂಹಾಸನ ವನ್ನೇರಿದುದು.

೨೨–೯–೧೪೨೨ ಫಿರೋಜಶಹಾನ ಅಧಿಕಾರ ತ್ಯಾಗ ಹಾಗೂ ಮೊದಲನೆಯ ಷಹಾ ಬುದ್ದೀನ ಅಹಮ್ಮದನು ಬಹಮನೀ ಸಿಂಹಾಸನವನ್ನೇರಿದುದು.

೧–೧೧–೧೪೨೨ ಹಜರತ್ ಗೇಸು ದರಾಜ(ಬಂದೇನವಾಜ)ನ ಮರಣ.

೧೪೨೨–೨೩ ವಿಜಯನಗರ ಹಾಗೂ ಮೊದಲನೆಯ ಅಹಮ್ಮದಶಹಾನ ನಡುವೆ ಕದನ.

೧೪೨೪ ವೀರವಿಜಯರಾಯನ ಮರಣ, ಇಮ್ಮಡಿ ದೇವರಾಯನ ಸಿಂಹಾಸನಾರೋಹಣ.

— ಬಹಮನಿ ರಾಜಧಾನಿಯನ್ನು ಗುಲ್ಬರ್ಗಾದಿಂದ ಬೀದರಕ್ಕೆ ಸ್ಥಳಾಂತರಿಸಿದುದು;

— ಭಾಸ್ಕರ ಕವಿಯಿಂದ 'ಜೀವಂಧರ ಚರಿತೆ' ಗ್ರಂಥ ರಚನೆ;

— ಹರಿದ್ರಾನದಿಯ ಆಣೆಕಟ್ಟು ಒಡೆದಾಗ ಬಲ್ಲರಸನು ಪುನಃ ಕಟ್ಟಿದುದಂ.

೧೪೨೪–೨೫ ಮೊದಲನೆಯ ಅಹಮ್ಮದಶಹಾನ ತೆಲಂಗಾಣ ಪ್ರದೇಶದ ಮೇಲಿನ ಮುತ್ತಿಗೆ ಹಾಗೂ ವರಂಗಲ್ ಮತ್ತು ಮಂಡಲಕೋಟೆಗಳನ್ನು ವಶಪಡಿಸಿಕೊಂಡುದುದು;

೧೪೨೫ ಇಮ್ಮಡಿ ದೇವರಾಯನ ಮಗ ವೀರಪರ್ವತರಾಯಂ ಒಡೆಯನು ತೆರಕಣಾಂಬಿ ಸೀಮೆಯನ್ನಾಳುತ್ತಿದ್ದುದು.

೧೪೨೬ ಇಮ್ಮಡಿ ದೇವರಾಯನ ಆಜ್ಞೆಯಂತೆ ರಾಜಧಾನಿಯ ಪಾನಸುಪಾರಿ ಬಜಾರದಲ್ಲಿ ಪಾರ್ಶ್ವನಾಥನಿಗಾಗಿ ಬಸದಿಯ ನಿರ್ಮಾಣ.

೧೪೨೭ ಓರಿಸ್ಸಾದ ಭಾನುದೇವರಸನು ಕೊಂಡವೀಡುವನ್ನು ವಶಪಡಿಸಿಕೊಂಡುದಂ;

— ಆರಗ ರಾಜ್ಯದಲ್ಲಿ ಎದ್ದ ಬೇಡರ ದಂಗೆಯನ್ನು ವೀರಣ್ಣ ಒಡೆಯನು ಹತ್ತಿಕ್ಕಿದುದಂ.

೧೪೨೭–೨೮ ಇಮ್ಮಡಿ ದೇವರಾಯನಿಂದ ಗುಂಟೂರ ಪ್ರದೇಶದ ಕೆಲವು ಭಾಗಗಳನ್ನಾಳುತ್ತಿದ್ದ ಪಂಥ ಮೈಲಾರರೆಡ್ಡಿ ಪರಾಜಯಗೊಂಡುದಂ.

— ಚುಂಡಿಯ ರೆಡ್ಡಿಗಳನ್ನು ಹಾಗೂ ಅವುಭು ಚೋಡನನ್ನು ಇಮ್ಮಡಿ ದೇವರಾಯ ಪರಾಭವಗೊಳಿಸಿದುದಂ.

೧೪೨೮ ವಿಜಯನಗರ ಸೈನ್ಯ ಕಲಿಂಗ ಮತ್ತು ವೇಲಮರ ಸೈನ್ಯಗಳನ್ನು ಪರಾಭವಗೊಳಿಸಿದುದು;

೧೪೨೮ ವಿಜಯನಗರವು ಕೊಂಡವೀಡುವನ್ನು ಪುನಃ ವಶಪಡಿಸಿಕೊಂಡುದು;

— ರಾಜಮಹೇಂದ್ರಿ ನಗರದಲ್ಲಿ ಇಮ್ಮಡಿ ದೇವರಾಯನಿಂದ ರೆಡ್ಡಿಯ ಆಳ್ವಿಕೆ ಪುನಃ ಪ್ರತಿಷ್ಠಾಪನೆ.

ಸುಮಾರು ೧೪೩೦ ಚಾಮರಸನಿಂದ 'ಪ್ರಭುಲಿಂಗಲೀಲೆ'ಯೂ, ಬೊಮ್ಮರಸನಿಂದ 'ಸೌಂದರಪುರಾಣ'ವೂ ಮತ್ತು ಕುಮಾರವ್ಯಾಸನಿಂದ 'ಭಾರತ'ವೂ ರಚನೆಗೊಂಡುದು.

೧೪೩೦–೩೨ ಲಕ್ಕಣ್ಣದಂಡನಾಯಕನು ಮುಳುಬಾಗಿಲು ಮತ್ತು ತೇಕಲ್‌ಗಳ ಅಧಿಕಾರಿಯಾಗಿದ್ದುದು.

೧೪೩೧ ಪಾಂಡ್ಯ ರಾಜ್ಯದಲ್ಲಿದ್ದ ದಂಗೆಯನ್ನು ಲಕ್ಕಣ್ಣದಂಡನಾಯಕ ಹತ್ತಿಕ್ಕಿದುದು.

೧೪೩೨ ಮೊದಲನೆಯ ಅಹಮ್ಮದಶಹಾನು ಮತ್ತೊಮ್ಮೆ ತೆಲಂಗಾಣ ಪ್ರದೇಶದ ಮೇಲೆ ದಾಳಿ ಮಾಡಿ ರಾಮಗಿರ್ ಕೋಟೆಯನ್ನು ವಶಪಡಿಸಿಕೊಂಡುದು.

— ವೀರಪಾಂಡ್ಯನಿಂದ ಕಾರ್ಕಳದಲ್ಲಿ ಗೊಮ್ಮಟ ಮೂರ್ತಿಯ (೪೧'.೫'' ಎತ್ತರ) ಸ್ಥಾಪನೆ.

೧೪೩೪ ಕಪಿಲೇಶ್ವರ ಗಜಪತಿಯು ಕಲಿಂಗ ಸಿಂಹಾಸನವನ್ನೇರಿದುದು.

ಸುಮಾರು ೧೪೩೫ ಶ್ರೀನಾಥನು 'ಹರಿವಂಶಮು'ವನ್ನು ರಚಿಸಿದುದು.

೧೪೩೫–೩೬ ರಾಯಚೂರು ಪ್ರದೇಶಕ್ಕಾಗಿ ಬಹಮನಿ ಹಾಗೂ ವಿಜಯನಗರಗಳ ನಡುವೆ ಕದನ ಮತ್ತು ಬಹಮನೀಯರು ಮುಂದಗಲ್ಲನ್ನು ವಶಪಡಿಸಿಕೊಂಡುದು. ಇಮ್ಮಡಿ ದೇವರಾಯನು ಅದನ್ನು ತಿರುಗಿ ಪಡೆದುದು.

೧೪೩೬ ರಾಜಮಹೇಂದ್ರಿ ಪ್ರದೇಶದ ಮೇಲೆ ಕಪಿಲೇಶ್ವರ ಗಜಪತಿಯ ದಾಳಿ;

— ಕಪಿಲೇಶ್ವರ ಗಜಪತಿಯು ವಿಜಯನಗರ ಸೈನ್ಯದಿಂದ ಸೋಲನ್ನನುಭವಿಸಿದುದು.

೧೭–೪–೧೪೩೬ ಮೊದಲನೆಯ ಅಹಮ್ಮದಶಹಾನ ಮರಣ ಹಾಗೂ ಇಮ್ಮಡಿ ಅಲ್ಲಾವುದ್ದೀನ್ ಅಹಮ್ಮದಶಹಾನ ಸಿಂಹಾಸನಾರೋಹಣ.

೧೪೩೯ ಕಲ್ಯಾಣಕೀರ್ತಿಯಿಂದ 'ಜ್ಞಾನಚಂದ್ರೋದಯ'ದ ರಚನೆ.

೧೪೩೯ ಇಮ್ಮಡಿ ದೇವರಾಯನ ಸೇವಕ ಅಹಮ್ಮದ ಖಾನನಿಂದ ರಾಜಧಾನಿಯಲ್ಲಿ ಮಸೀದೆಯ ನಿರ್ಮಾಣ.

೧೪೪೦ ಲಕ್ಕಣ್ಣದಂಡನಾಯಕನು ಬಾರಕೂರರಾಜ್ಯದ ಮಂಡಳೇಶ್ವರನಾದುದು.

೧೪೪೩ (ಎಪ್ರೀಲ–ಡಿಸೆಂಬರ) ವಿಜಯನಗರದಲ್ಲಿ ಅಬ್ದುಲ್‌ರಜಾಕ್.

೧೪೪೩ ಇಮ್ಮಡಿ ದೇವರಾಯನ ಕೊಲೆಯ ಯತ್ನ.

— ಸಿಂಹಳದ ಮೇಲೆ ಲಕ್ಕಣ್ಣದಂಡನಾಯಕನ ದಾಳಿ.

ಸುಮಾರು ೧೪೪೩ ಕಪಿಲೇಶ್ವರ ಗಜಪತಿ ಹಾಗೂ ವೇಲಮರು ರೆಡ್ಡಿ ರಾಜ್ಯವಾದ ರಾಜಮಹೇಂದ್ರಿಯ ಮೇಲೆ ದಂಡೆತ್ತಿ ಹೋದುದು ಹಾಗೂ ಕಪಿಲೇಂದ್ರ ಗಜಪತಿಯ ಪರಾಭವ.

೧೪೪೩–೪೪ ಬಹಮನಿ ಹಾಗೂ ವಿಜಯನಗರದ ಮಧ್ಯೆ ಕದನ. ಬಹಮನೀಯರ ಪರಾಭವ.

೨೪–೫–೧೪೪೬ ಇಮ್ಮಡಿ ದೇವರಾಯನ ಮರಣ. ಆತನ ಸಹೋದರ ಪ್ರತಾಪ ದೇವನು ಸಿಂಹಾಸನವನ್ನಾಕ್ರಮಿಸಿದುದು.

— ಪ್ರತಾಪದೇವನ ಆಳ್ವಿಕೆಯ ಅಂತ್ಯ ಹಾಗೂ ಇಮ್ಮಡಿ ದೇವರಾಯನ ಮಗ ಮಲ್ಲಿಕಾರ್ಜುನನ ಸಿಂಹಾಸನಾರೋಹಣ.

೨–೪–೧೪೪೭ ವ್ಯಾಸರಾಯರ ಜನನ.

೧೪೪೯–೫೦ ವಿಜಯನಗರದ ಮೇಲೆ ಕಪಿಲೇಂದ್ರ ಗಜಪತಿಯ ದಾಳಿ, ಅದನ್ನು ಮಲ್ಲಿಕಾರ್ಜುನ ಹಿಮ್ಮೆಟ್ಟಿದುದು.

ಸುಮಾರು ೧೪೫೦ ಕಲ್ಲರಸನಿಂದ 'ಜನವಶ್ಯ'ದ ರಚನೆ.

೧೪೫೦ ವಿಜಯನಗರದ ಮೇಲೆ ಬಹಮನೀಯರ ದಾಳಿ, ಮಲ್ಲಿಕಾರ್ಜುನ ಅವರನ್ನು ಸೋಲಿಸಿದುದು.

೧೪೫೨ ಚಂದ್ರಗಿರಿರಾಜ್ಯಕ್ಕೆ ಸಾಳುವ ನರಸಿಂಹನನ್ನು ಮಹಾಮಂಡಳೇಶ್ವರನೆಂದು ನೇಮಿಸಿದ್ದು.

ಸುಮಾರು ೧೪೫೪ ಕಪಿಲೇಶ್ವರ ಗಜಪತಿಯು ರಾಜಮಹೇಂದ್ರಿಯನ್ನು ವಶಪಡಿಸಿ- ಕೊಂಡು. ಕೊಂಡವೀಡು ಹಾಗೂ ವಿನುಕೊಂಡ ಪ್ರದೇಶಗಳನ್ನು ಗೆದ್ದುದು.

ಸುಮಾರು ೧೪೫೫ 'ಹರವಿಲಾಸಮು' ಕರ್ತೃ ಶ್ರೀನಾಥ ಕವಿಯ ಮರಣ;

— ವಿದ್ಯಾನಂದನಿಂದ 'ಪ್ರಾಯಶ್ಚಿತ್ತ'ದ ಟೀಕು ರಚನೆಯ ಮುಕ್ತಾಯ.

೭-೫-೧೪೫೮ ಅಲ್ಲಾವುದ್ದೀನ್ ಹುಮಾಯೂನ್‌ಶಹಾನು ಬಹಮನಿ ಸಿಂಹಾಸನವನ್ನೇರಿದುದು.

೧೪೫೯ ಮುಖ್ಯಕಾರ್ಯ ನಿಮಿತ್ತ ಸಾಳ್ವ ನರಸಿಂಹನಿಗೆ ಚಂದ್ರಗಿರಿಯಿಂದ ಪೆನುಗೊಂಡೆಗೆ ಬರುವಂತೆ ಮಲ್ಲಿಕಾರ್ಜುನನು ಆಜ್ಞೆ ಇತ್ತುದು.

೧೪೬೦ ಕಪಿಲೇಂದ್ರನ ಮಗ ಹಮ್ಮೀರನು ಮಹಮ್ಮದ ಗವಾನನನ್ನು ಸೋಲಿಸಿ ವರಂಗಲ್ಲನ್ನು ವಶಪಡಿಸಿಕೊಂಡುದು.

— ಪೂಸಪತಿ ತಿಮ್ಮಭೂಪಾಲನು ಕಳಿಂಗದ ಅರಸನ ಪರವಾಗಿ ಉದಯಗಿರಿಯನ್ನು ವಶಪಡಿಸಿಕೊಂಡುದು.

೪-೯-೧೪೬೧ ಹುಮಾಯೂನ್‌ಶಹಾನ ಮರಣ.

೩೦-೭"೧೪೬೩ ಮುಮ್ಮಡಿ ಶಮ್ಸುದ್ದೀನ ಮಹಮ್ಮದನು ಬಹಮನಿ ಸಿಂಹಾಸನವನ್ನೇರಿದುದು.

೧೪೬೩ ಕಂಠರಾಜು ಮನೆತನದ ತಮ್ಮರಾಜು, ಹಾಗೂ ಆತನ ಮಗ ಬಸವನ ಸಹಾಯದಿಂದ ಹಮ್ಮೀರ ಮಹಾಪಾತ್ರನು ಉದಯಗಿರಿಯನ್ನು ವಶಪಡಿಸಿಕೊಂಡುದು.

೧೪೬೩ (ನವ್ಹಂಬರ-ಜೂನ) ಕಲಿಂಗ ಸೈನ್ಯವು ತಮಿಳು ನಾಡಿನ ಮೇಲೆ ದಾಳಿ ನಡೆಸಿ ದಕ್ಷಿಣ ಅರ್ಕಾಟ್ ಪ್ರದೇಶವನ್ನು ವಶಪಡಿಸಿಕೊಂಡುದು.

೧೪೬೫ ಪ್ರತಾಪರಾಯನ ಮಗ ಮುಮ್ಮಡಿ ವಿರೂಪಾಕ್ಷನು ಮಲ್ಲಿಕಾರ್ಜುನನಿಂದ ಅಧಿಕಾರ ಕಿತ್ತುಕೊಂಡು, ಮಲ್ಲಿಕಾರ್ಜುನನ ಮಗ ರಾಜಶೇಖರನ ಹಕ್ಕುಗಳನ್ನು ಮನ್ನಿಸದೇ ಸಿಂಹಾಸನವನ್ನೇರಿದುದು.

೧೪೬೬ ಮಹಮ್ಮದ ಗವಾನನು ಬಹಮನಿರಾಜ್ಯದ ಪ್ರಧಾನಮಂತ್ರಿಯೆಂದು ನೇಮಕಗೊಂಡುದು,

೧೪೬೮-೭೪ ರಷ್ಯಾದೇಶದ ಪ್ರವಾಸಿ ಅಥನೇಶಿಯಸ್ ನಿಕಿಟಿನ್ ಗುಲಬರ್ಗಾ ಹಾಗೂ ಭಾರತದ ಇನ್ನಿತರ ಪ್ರದೇಶಗಳಿಗೆ ಭೇಟಿ ನೀಡಿದುದು.

೧೪೬೯ ಉದಯಗಿರಿಯನ್ನು ಕಲಿಂಗರಿಂದ ಸಾಳ್ವನರಸಿಂಹನು ತಿರುಗಿ ವಶಪಡಿಸಿ ಕೊಂಡುದು;

— ಮುಮ್ಮಡಿ ವಿರೂಪಾಕ್ಷನ ಆಣತಿಯಂತೆ ಹೊನ್ನಾವರದ ಅಧಿಕಾರಿಯಿಂದ ಭಟ್ಕಳದಲ್ಲಿ ಮುಸ್ಲಿಮರ ಸಾಮೂಹಿಕ ಕೊಲೆ;

— ಬಾಣವಂಶದ ಭುವನೈಕವೀರ ಸಮರಕೋಲಾಹಲನು ಕಾಂಚಿಯನ್ನು ವಶಪಡಿಸಿಕೊಂಡುದು.

೧೪೭೦ ಮಹಮ್ಮದ ಗವಾನನು ವಿಜಯನಗರದಿಂದ ಗೋವೆಯನ್ನು ಕಿತ್ತು ಕೊಂಡುದು.

— ಕಪಿಲೇಶ್ವರ ಗಜಪತಿಯ ಮರಣ ಹಾಗೂ ಪುರುಷೋತ್ತಮ ಗಜಪತಿಯ ಸಿಂಹಾಸನಾರೋಹಣ;

— ಬಹಮನೀಯರು ಕೊಂಡವೀಡುವನ್ನು ಹಿಡಿದುದು.

೧೪೭೦-೭೧ ಕಾಂಚಿಯಲ್ಲಿ ವಿಜಯನಗರ ಆಳ್ವಿಕೆಯ ಪುನರ್ ಸ್ಥಾಪನೆ.

೧೪-೧-೧೪೭೧ ಮಹಮ್ಮದ ಗವಾನನು ಖೆಲ್ನವನ್ನು ವಶಪಡಿಸಿಕೊಂಡುದು;

೧೯-೭-೧೪೭೧ ಮಹಮ್ಮದ ಗವಾನನು ರೈಗ್ನವನ್ನು ಹಿಡಿದುದು.

೧೩-೧೨-೧೪೭೧ ಮಹಮ್ಮದ ಗವಾನನು ಸಂಗಮೇಶ್ವರವನ್ನು ವಶಕ್ಕೆ ತೆಗೆದು- ಕೊಂಡುದು.

ಸುಮಾರು ೧೪೭೧ ಸಮರಲೋಕನ ನೇತೃತ್ವದಲ್ಲಿ ಮಧುರೆಯಲ್ಲಿ ದಂಗೆ.

೧-೨-೧೪೭೨ ಗೋವೆ, ಬಹಮನೀಯರ ವಶವಾದುದು.

೧೪೭೨ ಮಹಮ್ಮದ ಗವಾನನು ಬೆಳಗಾವಿಯನ್ನು ವಶಪಡಿಸಿಕೊಂಡುದು;

— ಬೀದರದಲ್ಲಿ ಮಹಮ್ಮದ ಗವಾನನು ಮದರಸಾ (ಶಾಲೆ) ಕಟ್ಟಿಸಿದುದು.

೧೪೭೩-೭೫ ಬಿಜಾಪುರದಲ್ಲಿ ಭೀಕರ ಕ್ಷಾಮ.

೧೪೭೭ ಕೃಷ್ಣ-ಗೋದಾವರಿ ಮುಖಜ ಪ್ರದೇಶಕ್ಕಾಗಿ ಮುಮ್ಮಡಿ ಮಹಮ್ಮದ ಶಹಾ, ಪುರುಷೋತ್ತಮ ಗಜಪತಿ ಹಾಗೂ ಸಾಳ್ವ ನರಸಿಂಹರ ನಡುವ ತ್ರಿಕೋಣಸ್ಪರ್ಧೆ.

೧೪೮೧ ಮಾಲೂರಿನಿಂದ ಕಾಂಚಿಯುವರೆಗೆ ಮುಮ್ಮಡಿ ಮಹಮ್ಮದಶಹಾನ ದಂಡಯಾತ್ರೆ ಹಾಗೂ ಕಾಂಚಿಯ ಸುಲಿಗೆ;

— ಕಂದಕೂರು ಯುದ್ಧ, ಸಾಳ್ವನರಸಿಂಹನ ಸೈನ್ಯಾಧಿಕಾರಿ ಈಶ್ವರನಾಯಕನಿಂದ ಬಹಮನೀಯರ ಸೋಲು.

೫-೪-೧೪೮೧ ಮಹಮ್ಮದ ಗವಾನನ ಸಾವು.

೨೬-೩-೧೪೮೨ ಮುಮ್ಮಡಿ ಮಹಮ್ಮದಶಹಾನ ಸಾವು; ಇಮ್ಮಡಿ ಮಹಮೂದಶಹಾ ಬಹಮನಿ ಸಿಂಹಾಸನವನ್ನೇರಿದುದು.

೧೪೮೨ ಗೋವೆಯನ್ನು ತಿರುಗಿ ಪಡೆಯುವ ವಿಜಯನಗರದ ವ್ಯರ್ಥಪ್ರಯತ್ನ.

೧೪೮೫ ಸ್ವಂತ ಮಗನಿಂದ ಮುಮ್ಮಡಿ ವಿರೂಪಾಕ್ಷನ ಕೊಲೆ ಹಾಗೂ ಪಾಡೇರಾವನ ವಿಜಯನಗರದ ಸಿಂಹಾಸನಾರೋಹಣ.

— ಸಾಳ್ವ ಮೊದಲನೇ ನರಸಿಂಹನಿಂದ ವಿಜಯನಗರ ಸಿಂಹಾಸನದ ಆಕ್ರಮಣ ಹಾಗೂ ಸಂಗಮ ವಂಶದ ಅಂತ್ಯ.

ಸುಮಾರು ೧೪೮೫ ತೆರಕಣಾಂಬಿ ಬೊಮ್ಮರಸನಿಂದ 'ಆರಾಧ್ಯಚರಿತ್ರೆ', ಮತ್ತು ನೀಲಕಂಠ ಶಿವಾಚಾರ್ಯರಿಂದ 'ಜೀವಂಧರಸಾಂಗತ್ಯ' ರಚನೆಗೊಂಡುದು.

೨೦-೪-೧೪೮೫ ಸಾಳ್ವ ನರಸಿಂಹನಿಂದ ತಿರುಮಲೆಬೆಟ್ಟಕ್ಕೆ ಹೋಗುವ ಕಾಲುಹಾದಿಯಲ್ಲಿ ಶ್ರೀ ನರಸಿಂಹ ಸ್ವಾಮಿ ದೇವಾಲಯದ ಸ್ಥಾಪನೆ.

೧೬-೨-೧೪೮೭ ಕೃಷ್ಣದೇವರಾಯನ ಜನನ.

೧೪೮೭ ಸಂಗಮವಂಶದ ಮಲ್ಲಿಕಾರ್ಜುನನ ಮರಣ;

— ಪುರುಷೋತ್ತಮ ಗಜಪತಿ, ಗೋದಾವರಿ ಮುಖಜಪ್ರದೇಶವನ್ನು ಸ್ವಾಧೀನಪಡಿಸಿಕೊಂಡುದು.

೧೪೮೯ ಸಾಳ್ವ ಮೊದಲನೆಯ ನರಸಿಂಹನನ್ನು ಪುರುಷೋತ್ತಮ ಗಜಪತಿ ಸೋಲಿಸಿದುದು;

— ಬಿಜಾಪುರದಲ್ಲಿ ಯೂಸುಫ್ ಆದಿಲ್‌ಖಾನನು ತನ್ನ ಹೆಸರಿನಲ್ಲಿ ಕುತ್ಬ ಓದಿಸಿದುದು.

೧೪೯೧ ಸಾಳ್ವ ಮೊದಲನೆಯ ನರಸಿಂಹನ ಮರಣ;

— ಇಮ್ಮಡಿ ನರಸಿಂಹನು ಸಿಂಹಾಸನಕ್ಕೆ ಬಂದುದು.

೧೪೯೧–೧೫೦೩ ತುಳುವ ವಂಶದ ನರಸನಾಯಕನು ರಾಜಪ್ರತಿನಿಧಿಯಾಗಿದ್ದುದು.

೧೪೯೧ ಮನವ ಕದನದಲ್ಲಿ ಯೂಸೂಫ್ ಆದಿಲ್‌ಖಾನನ ಪತನ.

೨೯–೪–೧೪೯೨ ಯೂಸೂಫ್ ಆದಿಲ್‌ಖಾನನು ರಾಯಚೂರ ಪ್ರದೇಶವನ್ನು ಪುನಃ ಆಕ್ರಮಿಸಿದ್ದು.

೧೪೯೩ ವಿಜಯನಗರವನ್ನು ಹಿಡಿಯುವ ಯೂಸೂಫ್‌ಖಾನನ ಯತ್ನವನ್ನು ತುಳುವ ನರಸನಾಯಕನು ಭಂಗಗೊಳಿಸಿದುದು.

— ಮನವದುರ್ಗವನ್ನು ಯೂಸೂಫ್ ಖಾನನಿಂದ ವಶಪಡಿಸಿಕೊಂಡುದು.

೧೪೯೫ ಚೋಳರಾಜ್ಯದಲ್ಲಿ ಕೋನೇರಿರಾಜನು ಸ್ವತಂತ್ರನಾದದ್ದು.

೧೪೯೬ ಪುರುಷೋತ್ತಮ ಗಜಪತಿಯ ನಿಧನ ಹಾಗೂ ಪ್ರತಾಪರುದ್ರ ಗಜಪತಿಯ ಆಳ್ವಿಕೆಯ ಪ್ರಾರಂಭ.

೧೪೯೬–೯೭ ತುಳುವ ನರಸನಾಯಕನು ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡದ್ದು ಮತ್ತು ಗೋಕರ್ಣಕ್ಕೆ ದಂಡಯಾತ್ರೆ ಹೋದುದು.

೧೪೯೭ ತುಳುವ ನರಸನಾಯಕನು, ಜಾಟವರ್ಮನ್ ಕುಲಶೇಖರ ಪರಾಕ್ರಮ ಪಾಂಡ್ಯನನ್ನು ಸೋಲಿಸಿ ವಿಜಯನಗರದ ಆಳ್ವಿಕೆಗೊಳಪಡುವಂತೆ ಮಾಡಿದುದು.

೧೪೯೭ ಬಹಮನಿಯ ಮಹಮ್ಮದ ಶಹನ ಮಗನೊಡನೆ, ಯೂಸೂಫ್‌ಖಾನನ ಮಗಳು ಬೀಬಿ ಮಜೀತಿಯ ಮದುವೆ.

೧೪–೫–೧೪೯೮ ಕಲ್ಲೀಕೋಟೆಗೆ ವಾಸ್ಕೋ ಡಿ ಗಾಮನ ಆಗಮನ.

೧೪೯೯ ತುಳುವ ನರಸನಾಯಕನಿಂದ ಕೋನೇರಿರಾಜನ ಪರಾಭವ,

೧೪೯೯–೧೫೦೦ ಬಾಣ ಅರಸನು ತುಳುವ ನರಸನಾಯಕನಿಂದ ಪರಾಭವ ಹೊಂದಿದುದು.

ಸುಮಾರು ೧೫೦೦ ಸಿಂಗಿರಾಜನಿಂದ 'ಅಮಲ ಬಸವರಾಜ ಚರಿತೆ', ಕೋಟೇಶ್ವರನಿಂದ 'ಜೀವಂಧರ ಷಟ್ಪದಿ', ಯಶಃಕೀರ್ತಿಯಿಂದ 'ಧರ್ಮಸಮಾಭ್ಯುದಯ ಟೀಕು'. ಗುರುಬಸವನಿಂದ 'ಯಜುರ್ವೇದ ಭಾಷ್ಯ'ಕ್ಕೆ ಟೀಕು, ಮತ್ತು ಚೆನ್ನವೀರನಿಂದ 'ಸಾರಸ್ವತ ವ್ಯಾಕರಣ'ಕ್ಕೆ ಟೀಕು– ಇವುಗಳ ರಚನೆ.

೧೫೦೦ ಪುರುಷೋತ್ತಮ ಗಜಪತಿ ಹಾಗೂ ವಿಜಯನಗರ ಸೈನ್ಯಗಳ ನಡುವೆ ನಡೆದ ಕದನ.

೧೫೦೧ ಇಮ್ಮಡಿ ಮಹಮ್ಮದ ಶಹನು ರಾಯಚೂರು ಪ್ರದೇಶಕ್ಕೆ ಮುತ್ತಿಗೆ ಹಾಕಿ ರಾಯಚೂರ ಹಾಗೂ ಮುದಗಲ್ಲನ್ನು ವಶಪಡಿಸಿಕೊಂಡದ್ದು;

— ವಾಸ್ಕೋ ಡಿ ಗಾಮನು ತಿಮ್ಮೋಜನ ಹಡಗಗಳನ್ನು ಸುಟ್ಟು ಭಟ್ಕಳದಲ್ಲಿ ಇಳಿದದ್ದು,

೧೩–೧೨–೧೫೧೩ ತುಳುವ ನರಸನಾಯಕನ ಮರಣ. 052351

೧೫೦೪–೧೫೧೪ ಪೋರ್ತಗೀಜ ಯಾತ್ರಿಕ ದುವಾರ್ತೆ ಬಾರ್ಬೋಸನು ವಿಜಯನಗರವನ್ನು ಸಂದರ್ಶಿಸಿದುದು.

೧೫೦೪ ಯೂಸೂಫ್ ಆದಿಲ್‌ಖಾನನು ಗುಲ್ಬರ್ಗವನ್ನು ಗೆದ್ದುದು,

೧೫೦೫ (ಮಾರ್ಚ) ಡಾಮ್ ಫ್ರಾನ್ಸಿಸ್ಕೋ ಡಿ ಅಲ್ಮೇಡಾ ಪೋರ್ತಗೀಜ ಗವರ್ನರನಾಗಿ ನೇಮಕಗೊಂಡುದು,

೧೫೦೫ (ಸೆಪ್ಟಂಬರ್) ಡಾಮ್ ಫ್ರಾನ್ಸಿಸ್ಕೋ ಡಿ ಅಲ್ಮೇಡನು ಅಂಜದೀವ ದ್ವೀಪವನ್ನು ಗೆದ್ದುಕೊಂಡು ಅಲ್ಲಿ ಕೋಟೆಯೊಂದನ್ನು ಕಟ್ಟಿಸಿದ್ದು.

೧೫೦೫ ಕನ್ನಾನೋರಿನಲ್ಲಿ ವಿಜಯನಗರದ ರಾಯಭಾರಿ, ಡಾಮ್ ಫ್ರಾನ್ಸಿಸ್ಕೋ ಡಿ ಅಲ್ಮೇಡಾನನ್ನು ಸಂದರ್ಶಿಸಿದ್ದು;

— ತುಳುವ ವೀರನರಸಿಂಹನು ಇಮ್ಮಡಿ ನರಸಿಂಹನ ಕೊಲೆಗೈದದ್ದು;

— ವೀರನರಸಿಂಹನು ವಿಜಯನಗರ ಸಿಂಹಾಸನವನ್ನೇರಿ ತುಳುವ ಮನೆತನದ ಆಳ್ವಿಕೆ ಪ್ರಾರಂಭಿಸಿದ್ದು ಹಾಗೂ ಸಾಳ್ವ ಮನೆತನದ ಆಳ್ವಿಕೆಯು ಅಂತ್ಯ.

— ಪೋರ್ತಗೀಜರು ಹೊನ್ನಾವರದ ಮೇಲೆ ದಾಳಿ ಮಾಡಿದುದು;

— ಪೋರ್ತಗೀಜರೊಡನೆ ಶಾಂತಿ ಒಪ್ಪಂದ ಮಾಡಿಕೊಳ್ಳಲು ತಿಮ್ಮೋಜ ಮತ್ತು ಮಲೆರಾವ್‌ನ ಅಧಿಕಾರಿಯೊಬ್ಬನು ಅಂಜದೀವಕ್ಕೆ ಭೇಟಿ ಇತ್ತುದು.

೧೫೦೬ ಡಾಮ್ ಫ್ರಾನ್ಸಿಸ್ಕೋ ಡಿ ಅಲ್ಮೇಡನು ಭಟ್ಕಳದಲ್ಲಿ ಕೋಟೆ ಕಟ್ಟಲು ವಿಜಯನಗರದ ಅರಸನ ಒಪ್ಪಿಗೆ ಪಡೆಯುವ ವಿಫಲಯತ್ನ.

೧೫೦೭ ಉಮ್ಮತ್ತೂರಿನ ನಂಜರಾಜನು ಸ್ವತಂತ್ರನೆಂದು ಘೋಷಿಸಿಕೊಂಡದ್ದು.

೧೫೦೮ (ಜನೆವರಿ) ಚೌಲ್ ಕದನದಲ್ಲಿ ಪೋರ್ತಗೀಜರ ಸೋಲು.

೧೫೦೯ (ಫೆಬ್ರುವರಿ) ದಿಯೂ ಕದನದಲ್ಲಿ ಪೋರ್ತಗೀಜರ ಸೋಲು.

೧೫೦೯ ತುಳುವ ವೀರನರಸಿಂಹನ ಮರಣ,

೨೫-೭-೧೫೦೯ ಕೃಷ್ಣದೇವರಾಯನು ವಿಜಯನಗರದ ಅರಸನಾದದ್ದು.

೮-೮-೧೫೦೯ ಕೃಷ್ಣದೇವರಾಯನ ಪಟ್ಟಬಂಧೋತ್ಸವ.

೫-೧೧-೧೫೦೯ ಅಫಾನ್ಸೊ ಡಿ ಅಲ್ಬುಕರ್ಕ, ಪೋರ್ತಗೀಜ ಗವ್ಹರ್ನರನಾಗಿ ನೇಮಕ.

೧೫೦೯ (ನವ್ಹೆಂಬರ-ಡಿಸೆಂಬರ) ಪ್ರತಾಪರುದ್ರ ಗಜಪತಿಯು ಕೃಷ್ಣದೇವ ರಾಯನ ಕೈಯಲ್ಲಿ ಸೋಲನ್ನು ಅನುಭವಿಸಿದ್ದು ಮತ್ತು ಕೃಷ್ಣದೇವ ರಾಯನು, 'ಗಜಪತಿ ಗಜಕೂಟಪಾಕಲ' ಎಂಬ ಬಿರುದು ಧರಿಸಿದ್ದು.

೧೫೦೯-೧೦ ದಿವಾನಿಯುದ್ಧದಲ್ಲಿ ಬಹಮನೀಯರನ್ನು ಕೃಷ್ಣದೇವರಾಯನು ಸೋಲಿಸಿದ್ದು.

೧೫೧೦ (ಜನೇವರಿ) ಫಾದರ ಲೂಯಿಸನು ವಿಜಯನಗರಕ್ಕೆ ಪೋರ್ತುಗೀಜ ರಾಯಭಾರಿಯಾಗಿ ಬಂದದ್ದು.

೨೮-೨-೧೫೧೦ ಪೋರ್ತಗೀಜರು ಗೋವೆಯನ್ನು ಆಕ್ರಮಿಸಿದ್ದು.

೧೫೧೦ (ಮಾರ್ಚ) ಭಟ್ಕಳದಲ್ಲಿ ಕೋಟೆ ಕಟ್ಟಿಕೊಳ್ಳಲು ವಿಜಯನಗರದ ಅರಸನ ಅಪ್ಪಣೆಗಾಗಿ ಅಲ್ಬುಕರ್ಕನು ಗಾಸ್ಪರ ಚನೋಕನನ್ನು ವಿಜಯನಗರಕ್ಕೆ ಕಳಿಸಿದ್ದು.

೧೭-೫-೧೫೧೦ ಘಾಜಿ ಕಣಿವೆಯನ್ನು ದಾಟುವಾಗ ಪೋರ್ತಗೀಜರಿಂದ ಆದಿಲ್ ಶಹನ ಸೈನ್ಯವು ಸಾಕಷ್ಟು ಸಾವುನೋವುಗಳನ್ನು ಅನುಭವಿಸಿದ್ದು.

೨೦-೫-೧೫೧೦ ಗೋವೆಯನ್ನು ಆದಿಲ್‌ಶಹಾನ ಸೈನ್ಯ ಪುನಃ ವಶಪಡಿಸಿಕೊಂಡದ್ದು.

೧೫೧೨ (ಸೆಪ್ಟಂಬರ) ರಾಯಸಂ ಕೊಂಡಮರಸನು ಪೆನುಗೊಂಡೆ ಅಧಿಕಾರಿಯಾಗಿ ನೇಮಕಗೊಂಡದ್ದು;

— ಕೃಷ್ಣದೇವರಾಯನು ರಾಯಚೂರು ಕೋಟೆಯನ್ನು ವಶಪಡಿಸಿಕೊಂಡದು.

೧೫೧೦ (ಜುಲೈ) ಯೂಸೂಫ್ ಆದಿಲ್‌ಖಾನನು ಗುಲ್ಬರ್ಗಾವನ್ನು ಮುತ್ತಿದುದು.

೧೭-೮-೧೫೧೦ ಕನ್ನಾನೋರ್‌ಗೆ ಹೋಗುವ ಹಾದಿಯಲ್ಲಿ ಅಲ್ಬುಕರ್ಕನು ಅಂಜ ದೀವವನ್ನು ತಲುಪಿದ್ದು,

೨೬-೮-೧೫೧೦ ಕನ್ನಾನೋರ್‌ಗೆ ಅಲ್ಬುಕರ್ಕನ ಆಗಮನ.

೧೩-೧೦-೧೫೧೦ ಪ್ರತಾಪರುದ್ರ ಗಜಪತಿಯೊಂದಿಗೆ ಕೃಷ್ಣದೇವರಾಯನ ಯುದ್ಧ;

— ಕೃಷ್ಣದೇವರಾಯನಿಂದ ಸಾಳ್ವ ತಿಮ್ಮನು ಕೊಂಡವೀಡು ರಾಜ್ಯದೊಳಗಣ ಅಮ್ಮನಂಬ್ರೋಲಿ ಸೀಮೆಯ ಕೊಂಚ್ಚಿರ್ಲಕೋಟೆ ಗ್ರಾಮವನ್ನು ದತ್ತಿಯಾಗಿ ಪಡೆದುದು.

೨೫-೧೧-೧೫೧೦ ಗೋವೆಯನ್ನು ಪೋರ್ತುಗೀಜರು ವಶಪಡಿಸಿಕೊಂಡದ್ದು.

೧೫೧೦ ಕೃಷ್ಣದೇವರಾಯನ ಸೇವೆಯಲ್ಲಿ ಶಾಲುವನಾಯಕನು ಸೇರಿದಂದು;

— ರಾಜಧಾನಿಯ ವಿರೂಪಾಕ್ಷ ದೇವಾಲಯದ ರಂಗಮಂಟಪವನ್ನು ತನ್ನ ಪಟ್ಟಬಂಧೋತ್ಸವದ ಸವಿನೆನಪಿಗಾಗಿ ಕೃಷ್ಣದೇವರಾಯನು ಕಟ್ಟಿಸಿ ಸುವರ್ಣ ಕಮಲ ಮತ್ತು ನಾಗಾಭರಣಗಳನ್ನು ವಿರೂಪಾಕ್ಷನಿಗೆ ಅರ್ಪಿಸಿದುದು.

— ಮಲಿಕ್ ಅಹಮ್ಮದ ಬಹ್ರೀ ನಿಜಾಮುಲ್ಮುಲ್ಕನ ನಿಧನ;

— ಕೃಷ್ಣದೇವರಾಯನು ರಾಯಚೂರನ್ನು ವಶಪಡಿಸಿಕೊಂಡದ್ದು;

— ಯೂಸೂಫ್ ಆದಿಲ್‌ಖಾನನ ನಿಧನ; ಬಿಜಾಪುರದ ಆದಿಲ್‌ಶಾಹಿ ಸಿಂಹಾಸನವನ್ನು ಇಸ್ಮಾಯಿಲ್ ಆದಿಲ್‌ಶಹ ಏರಿದಂದು; ಕಮಾಲಖಾನನಿಂದ ಇಸ್ಮಾಯಿಲ್ ಆದಿಲ್‌ಶಹಾನ ಬಂಧನ.

ಸುಮಾರು ೧೫೧೦ ಕೃಷ್ಣದೇವರಾಯನು ಸಾಗರ ಮತ್ತು ಕಲಂಬರಿಗೆ (ಗುಲ್ಬರ್ಗಾ) ಯಲ್ಲಿ ಮುಸ್ಲೀಮ್ ಸೈನ್ಯದ ತುಕಡಿಗಳನ್ನು ನಾಶಮಾಡಿದುದು;

— ಚೈತನ್ಯ ಮಹಾಪ್ರಭು, ಅರ್ಕಾಟ ಪ್ರದೇಶವಲ್ಲಿ ಬೌದ್ಧರೊಂದಿಗೆ ವಾದಿಸಿದ್ದು.

೧೫೧೧ (ಮಾರ್ಚ) ಬಿಜಾಪುರದಲ್ಲಿ ಕಮಾಲ್‌ಖಾನನ ಕೊಲೆ.

೧೫೧೧ ವಿಜಯನಗರದಲ್ಲಿ ಫಾದರ ಲೂಯಿಸನ ಕೊಲೆ.

೧೫೧೨ (ಜನೇವರಿ) ಸುಫ್‌ವಿಯ ರಾಯಭಾರಿ ಯಾದಗಾರ್ ಬೇಗ್ ಭೇಟಿ,

೧೫೧೨ (ಸೆಪ್ಟಂಬರ) ಕೃಷ್ಣದೇವರಾಯನು ಉಮ್ಮತ್ತೂರಿನ ಗಂಗರಾಜನನ್ನು ಸೋಲಿಸಿ ಶ್ರೀರಂಗಪಟ್ಟಣ, ಪೆನುಕೊಂಡ ಮತ್ತು ಉಮ್ಮತ್ತೂರುಗಳನ್ನು ವಶಪಡಿಸಿಕೊಂಡದ್ದು.

ಸುಮಾರು ೧೫೧೩ ಗುಬ್ಬಿಮಲ್ಲಣಾರ್ಯನಿಂದ 'ಭಾವಚಿಂತಾರತ್ನ'ದ ರಚನೆ.

೧೫೧೩ ಗುತ್ತಿರಾಜ್ಯದ ಅಧಿಕಾರಿಯಾಗಿ ತುಳವ ಗೋವಿಂದರಾಜನ ನೇಮಕ.

೧೫೧೩ ಕೃಷ್ಣದೇವರಾಯನು ವಿಠ್ಠಲ ದೇವರಿಗೆ ವಿರುಪಾಪುರ ಗ್ರಾಮವನ್ನು ದತ್ತಿ ಬಿಟ್ಟದ್ದು.

೧೦-೨-೧೫೧೩ ಚಿನ್ನಾದೇವಿ ಮತ್ತು ತಿರುಮಲಾದೇವಿಯರೊಡನೆ ಕೃಷ್ಣದೇವ ರಾಯನು ತಿರುಪತಿಗೆ ಭೇಟಿ ನೀಡಿದುದು.

೧೨-೩-೧೫೧೩ ಕೃಷ್ಣದೇವರಾಯನ ಎರಡನೇ ಪಟ್ಟಬಂಧೋತ್ಸವ.

೧೫೧೩ ಮೊದಲನೆಯ ಕೆಂಪೇಗೌಡನು ಯಲಹಂಕದ ಪ್ರಭುವಾದದ್ದು.

೨-೫-೧೫೧೩ ಕೃಷ್ಣದೇವರಾಯನು ತಿರುಪತಿಗೆ ಹೋಗಿ ರತ್ನ ಖಚಿತವಾದ ಮೂರು ಕಿರೀಟಗಳನ್ನು ದತ್ತಿಯಾಗಿತ್ತುದು; ನಂತರ ಕಾಳಹಸ್ತೀಶ್ವರನನ್ನು ಸಂದರ್ಶಿಸಿದುದು.

೯-೬-೧೫೧೩ ಉದಯಗಿರಿಯ ಪತನ. ಗಜಪತಿಯ ಅಧಿಕಾರಿ ತಿರುಮಲಕಾಂತ-ರಾಯನನ್ನು ಸೆರೆಹಿಡಿದದ್ದು ಹಾಗೂ ರಾಯಸಂ ಕೊಂಡಮರಸನನ್ನು ಉದಯಗಿರಿಯ ಅಧಿಕಾರಿಯನ್ನಾಗಿ ನೇಮಿಸಿದ್ದು.

೧೩-೬-೧೫೧೩ ತಿರುಪತಿಗೆ ಕೃಷ್ಣದೇವರಾಯನ ಸಂದರ್ಶನ.

೧೫೧೩ ಕೃಷ್ಣದೇವರಾಯನು ಉದಯಗಿರಿಯ ವಿಜಯದಲ್ಲಿ ವಶಪಡಿಸಿಕೊಂಡಿದ್ದ ಬಾಲಕೃಷ್ಣನ ವಿಗ್ರಹ ಸ್ಥಾಪನೆಗಾಗಿ ವಿಜಯನಗರದಲ್ಲಿ ದೇವಾಲಯ ಕಟ್ಟಲು ಪ್ರಾರಂಭಿಸಿದ್ದು.

— ಕೃಷ್ಣದೇವರಾಯನ ಅರಸಿಯರಾದ ಚಿನ್ನಾದೇವಿ ಮತ್ತು ತಿರುಮಲಾ-ದೇವಿಯರು ವಿಠ್ಠಲ ದೇವಾಲಯದ ಗೋಪುರಗಳನ್ನು ಕಟ್ಟಿಸಿದ್ದು.

೨-೬-೧೫೧೪ ಕಾಂಚೀಪುರದ ಪೆರುಳಾಳ ಪೆರುಮಾಳ್ ದೇವಾಲಯದ ಪುಣ್ಯಕೋಟಿ ವಿಮಾನದ ಚಿನ್ನದ ಲೇಪನೆಗಾಗಿ ಕೃಷ್ಣದೇವರಾಯನಿಂದ ಚಿನ್ನದ ದಾನ.

೬-೭-೧೫೧೪ ಚಿನ್ನಾದೇವಿ ಮತ್ತು ತಿರುಮಲಾದೇವಿಯರೊಡನೆ ಕೃಷ್ಣದೇವರಾಯನು ಉದಯಗಿರಿಯ ವಿಜಯದ ನಂತರ ರಾಜಧಾನಿಗೆ ಹಿಂತಿರುಗುವಾಗ ತಿರುಪತಿಗೆ ದರ್ಶನವಿತ್ತುದು.

೮-೧೧-೧೫೧೪ ಕೃಷ್ಣದೇವರಾಯನ ರಾಯಭಾರಿ ರತ್ನಪ್ಪ ಒಡೆಯನು ಅಲ್ಬುಕರ್ಕನ ಆಸ್ಥಾನದಲ್ಲಿ.

೧೬-೨-೧೫೧೫ ವಿಜಯನಗರದಲ್ಲಿ ಬಾಲಕೃಷ್ಣನ ವಿಗ್ರಹ ಸ್ಥಾಪನೆ,

೧೫೧೫ ಕೃಷ್ಣದೇವರಾಯನು ಅದ್ದಂಕಿ, ವಿನುಕೊಂಡ, ಬೆಲ್ಲಂಕೊಂಡ, ನಾಗಾರ್ಜುನಕೊಂಡ ಮತ್ತು ತಂಗೆಡಗಳನ್ನು ವಶಪಡಿಸಿಕೊಂಡದ್ದು.

೧೫೧೫ ಪೂಸಪಾತಿ ರಾಚಿರಾಜುವನ್ನು ಸೋಲಿಸಿ, ಕೇತಾವರಂ ವಶಪಡಿಸಿಕೊಂಡುದು;

— ಕೊಂಡವೀಡಿಗೆ ದಾಳಿಯಿಡಲು ಸಿದ್ಧತೆ:

— ಕೊಂಡವೀಡುವನ್ನು ತಿಮ್ಮರಸನು ವಶಪಡಿಸಿಕೊಂಡುದು;

— ಪ್ರತಾಪರುದ್ರ ಗಜಪತಿಯ ಅಧಿಕಾರಿಗಳಾದ, ವೀರಭದ್ರ (ಗಜಪತಿಯ ಮಗ), ಶ್ರೀನಾಥರಾಜು, ಲಕ್ಷ್ಮೀಪತಿರಾಜು, ಪಶ್ಚಿಮ ಬಾಳಚಂದ್ರ, ಪೂಸಪಾತಿ ರಾಚಿರಾಜು (ಗಜಪತಿಯ ಅಳಿಯ), ಮಲ್ಲುಖಾನ ಮತ್ತು ಉದ್ದಂಡಖಾನರನ್ನು ಸೆರೆಹಿಡಿದುದು.

— ನಾದಿಂಡ್ಲಗೋಪನು ಕೊಂಡವೀಡಿನ ಅಧಿಕಾರಿಯಾಗಿ ನೇಮಕಗೊಂಡುದು,

೧೩-೬-೧೫೧೫ ಕೃಷ್ಣದೇವರಾಯನ ತಿರುಪತಿ ಸಂದರ್ಶನ.

೮-೭-೧೫೧೫ ಕೃಷ್ಣದೇವರಾಯನು ಅಮರಾವತಿಯ ಅಮರೇಶ್ವರನ ದರ್ಶನ ಪಡೆದುದು.

೨೫-೭-೧೫೧೫ ಕೃಷ್ಣದೇವರಾಯನು ತನ್ನ ರಾಣಿಯರೊಡಗೂಡಿ ಶ್ರೀಶೈಲವನ್ನು ಸಂದರ್ಶಿಸಿ ಅಲ್ಲಿ ಮಂಟಪವನ್ನು ಕಟ್ಟಿಸಿದುದು.

೨೧-೧೨-೧೫೧೫ ನಂದಿತಿಮ್ಮಣ್ಣನಿಂದ ‘ ಪಾರಿಜಾತಾಪಹರಣಮು ’ ಕಾವ್ಯದ ರಚನೆ.

೨೧-೧೨-೧೫೧೫ ಕೃಷ್ಣದೇವರಾಯನು ತನ್ನ ಅರಸಿಯರೊಂದಿಗೆ ಅಹೋಬಲಂ-ನಲ್ಲಿ ವಾಸ್ತವ್ಯ ಮಾಡಿದುದು.

೧೫೧೫ ಪೋರ್ತಗೀಜರು ಮಂಗಳೂರನ್ನು ಸುಟ್ಟು, ಬಾರಕೂರನ್ನು ಲೂಟಿ ಮಾಡಿದ್ದು.

೧೫೧೫-೧೫೧೬ ಪ್ರತಾಪರುದ್ರ ಗಜಪತಿಯ ಮಗ, ವೀರಭದ್ರನು ಮಳೆಬೆನ್ನೂರ ಸೀಮೆಯ ಅಧಿಕಾರಿಯಾಗಿ ನೇಮಕಗೊಂಡುದು.

೧೫೧೬ ಕೃಷ್ಣದೇವರಾಯನಿಂದ ವಿಜಯನಗರದ ವಿಠ್ಠಲ ಮಂದಿರದಲ್ಲಿ ನೂರು ಕಂಬಗಳ ಮಂಟಪದ ನಿರ್ಮಾಣ;

— ರಾಜಧಾನಿಯಲ್ಲಿ ಕೃಷ್ಣದೇವರಾಯನಿಂದ ವಿಜಯಭವನದ ನಿರ್ಮಾಣ.

೭-೨-೧೫೧೬ ಕೃಷ್ಣದೇವರಾಯನು ವಿಜಯವಾಡವನ್ನು ವಶಪಡಿಸಿಕೊಂಡುದು.

೩೦-೩-೧೫೧೬ ಕೃಷ್ಣದೇವರಾಯನು ಅರಸಿಯರ ಜೊತೆಗೆ ಸಿಂಹಾಚಲಕ್ಕೆ ಭೇಟಿ-ಯಿತ್ತುದು.

೧೫೧೬ (ಜುಲೈ) ಕೃಷ್ಣದೇವರಾಯನಿಂದ ತೆಲಂಗಾಣ ಪ್ರದೇಶದಲ್ಲಿ ಯುದ್ಧ,

೨೯-೬-೧೯೫೬ ಕಲಿಂಗದಿಂದ ರಾಜಮಹೇಂದ್ರಿ ಮಾರ್ಗವಾಗಿ ಕೃಷ್ಣದೇವರಾಯನು ವಿಜಯನಗರಕ್ಕೆ ಹಿಂದಿರುಗಿದುದು.

೧೫೧೬ (ಅಕ್ಟೋಬರ) ಕೃಷ್ಣದೇವರಾಯನು ಪೋತನೂರನ್ನು ವಶಪಡಿಸಿ ಕೊಂಡುದು.

೧೫೧೭ ಕೃಷ್ಣದೇವರಾಯನಿಂದ ಇಸ್ಮಾಯಿಲ್ ಆದಿಲ್‌ಶಹನ ಪರಾಭವ,

೨-೧-೧೫೧೭ ಕೃಷ್ಣದೇವರಾಯನು ತನ್ನ ಅರಸಿಯರೊಂದಿಗೆ ತಿರುಪತಿಯನ್ನು ಸಂದರ್ಶಿಸಿ, ದೇವಾಲಯದ ವಿಮಾನಕ್ಕೆ ಚಿನ್ನದಲೇಪನ ಮಾಡಿಸಲು ಮೂವತ್ತು ಸಾವಿರ ಚಿನ್ನದ ವರಹಗಳನ್ನು ದಾನಮಾಡಿದುದು.

೧೪-೧-೧೫೧೭ ವಿಷ್ಣುಕಾಂಚಿಗೆ ಕೃಷ್ಣದೇವರಾಯನ ಭೇಟಿ.

೬-೨-೧೫೧೭ 'ಮಹಾಮುಖಂ' ಉತ್ಸವದ ಸಂದರ್ಭದಲ್ಲಿ ಕೃಷ್ಣದೇವರಾಯನು ಕುಂಭಕೋಣಂ ಸಂದರ್ಶಿಸಿದ್ದು.

"ಕನ್ನಡ" ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.



೧೫೧೭ ಕೃಷ್ಣದೇವರಾಯನು ಕಾಳಹಸ್ತಿ ಸಂದರ್ಶಿಸಿ ಗೋಪುರವೊಂದನ್ನು ಕಟ್ಟಿಸಿದ್ದು.

೧೫೧೭ ಪೋರ್ತುಗೀಜ ಗವ್ಹರ್ನರನಾದ ಲೋಪೋ ಸೋರೆಸ್ ಕ್ರಿಸ್ತಾವೊ ಡಿ ಫಿಗುರೆಡೊನನ್ನು ಕಂದುರೆಗಳೊಂದಿಗೆ ಕೃಷ್ಣದೇವರಾಯನ ಆಸ್ಥಾನಕ್ಕೆ ಕಳಿಸಿದುದು.

೧೫೧೭ ಕೃಷ್ಣದೇವರಾಯನು 'ಚಾಟುರ್' ವಶಪಡಿಸಿಕೊಂಡುದು.

೨೫–೪–೧೫೧೮ ಕೃಷ್ಣಾನದೀ ತೀರದಲ್ಲಿ ಕೃಷ್ಣದೇವರಾಯನು, 'ಮನುಚರಿತ'ದ ಕರ್ತೃ ಆಲ್ಲಸಾನಿ ಪೆದ್ದನ್ನನಿಗೆ ಗ್ರಾಮವೊಂದನ್ನು ದತ್ತಿಬಿಟ್ಟುದು.

೮–೯–೧೫೧೮ ತಿರುಪತಿ ದೇವಾಲಯದ ವಿಮಾನಕ್ಕೆ ಚಿನ್ನದ ಲೇಪನ ಮಾಡುವ ಕಾರ್ಯದ ಮುಕ್ತಾಯ.

೧೬–೧೦–೧೫೧೮ ತಿರುಮಲಾದೇವಿಗೆ ಪುತ್ರೋತ್ಸವದ ಸ್ಮರಣಾರ್ಥ, ಕೃಷ್ಣ ದೇವರಾಯನು ತಿರುಪತಿಗೆ ಭೇಟಿ ನೀಡಿದುದು.

೨೭–೧–೧೫೧೯ ಕೃಷ್ಣದೇವರಾಯನಿಂದ 'ಅಮುಕ್ತಮಾಲ್ಯ'ದ ರಚನಾರಂಭ.

೮–೮–೧೫೧೯ ಕೃಷ್ಣದೇವರಾಯನು, ಪ್ರತಾಪರುದ್ರಗಜಪತಿಯಿಂದ ವಶಪಡಿಸಿಕೊಂಡ ಕಳಿಂಗದಂಡಪಾಟಕ್ಕೆ ಸೇರಿದ ಕೆಲವು ಗ್ರಾಮಗಳನ್ನು ಸಿಂಹಾಚಲ ದೇವಸ್ಥಾನಕ್ಕೆ ದತ್ತಿಬಿಟ್ಟದ್ದು.

೧೩–೨-೧೫೨೦ ಗೋವೆಯಿಂದ, ಕೆಂಪುಸಮುದ್ರಕ್ಕೆ ಸೆಕ್ವೇರಾನ ನಿರ್ಗಮನ.

೧೫೨೦ (ಫೆಬ್ರುವರಿ) ಕೃಷ್ಣದೇವರಾಯನ ರಾಯಚೂರ ಮುತ್ತಿಗೆ.

೧೯–೫–೧೯೨೦ ರಾಯಚೂರನ್ನು ವಶಪಡಿಸಿಕೊಳ್ಳಲು, ಬಿಜಾಪುರ ವಿಜಯನಗರಗಳ ಮಧ್ಯೆ ಕದನ ಹಾಗೂ ಗೊಬ್ಬೂರು, ಸಗರ, ಸುರಪುರ ಮತ್ತು ನಯಿರಾಮಣ ಕದನಗಳಲ್ಲಿ. ಭಿಜಾಪುರ ಸೈನ್ಯದ ಸೋಲು; ಇಬ್ರಾಹಿಮ್ ಆದಿಲ್‌ಶಹಾನು ರಾಯಚೂರ ಪ್ರದೇಶದಿಂದ ಕಾಲ್ತೆಗೆದುದು.

೧೫೨೦ ನಾಗಲಾದೇವಿಯ ನೆನಪಿಗಾಗಿ ಕೃಷ್ಣದೇವರಾಯನು ನಾಗಲಾಪೂರ ಕಟ್ಟಿಸಿದ್ದು; ನಾಗಲಾಪುರದ ಬಳಿ ಪೋರ್ತುಗೀಜ ಇಂಜಿನಿಯರ ಜೋ ಡಿ ಲಾ

೧೫೨೦ ಪೋಂಟೆಯ ಸಹಾಯದಿಂದ ಕೃಷ್ಣದೇವರಾಯನು ಜಲಾಶಯ ವೊಂದನ್ನು ನಿರ್ಮಿಸಿದುದು;

— ಅಪ್ಪಯ್ಯ ದೀಕ್ಷಿತನ ಜನನ.

೧೫೨೦–೧೫೨೨ ವಿಜಯನಗರಕ್ಕೆ ಪೋರ್ತುಗೀಜ ಪ್ರವಾಸಿ ಡೊಮಿಂಗೊ ಪೇಸನ ಆಗಮನ ಮತ್ತು ವಾಸ್ತವ್ಯ.

೧೭–೨–೧೫೨೧ ರಾಣಿಯರೊಂದಿಗೆ, ಕೃಷ್ಣದೇವರಾಯನು, ತಿರುಪತಿಗೆ ಪುನಃ ಭೇಟಿ ನೀಡಿದ್ದು.

೧೫೨೧ (ಜುಲೈ) ವಿಜಯನಗರದ ಅಧಿಕಾರಿ ಕಂಠಮರಾಜು ಸಿಂಗರಾಜು, ರಾಯಚೂರಿನಲ್ಲಿ ರಂಗನಾಥ ದೇವಾಲಯ ಕಟ್ಟಿಸಿದುದು.

೧೫–೭–೧೫೨೧ ಕೃಷ್ಣದೇವರಾಯನು ರಾಯಚೂರು, ಆದವಾನಿ. ಮನುವ ಮತ್ತು ಪಾನುಂಗಲ್ಲು ಕೋಟೆಗಳನ್ನು ಗೆದ್ದನಂತರ ಭೀಮಾ-ಕೃಷ್ಣಾನದಿಗಳ ಸಂಗಮ ಸ್ಥಳವಾದ ಕಡಲೂರನ್ನು ಸಂದರ್ಶಿಸಿದ್ದು.

೧೫೨೧ ಕೃಷ್ಣದೇವರಾಯನು ಕಲಬುರಿಗೆಯನ್ನು ಗೆದ್ದು, ಬಹಮನಿ ವಂಶವನ್ನು ಪುನಃ ಸ್ಥಾಪಿಸಿದ್ದು;

— ತೆಲುಗು ಚೋಳ ವಂಶದ ತಿಮ್ಮರಾಜನಿಂದ ಹಜಾರ ರಾಮಸ್ವಾಮಿ ದೇವಸ್ಥಾನದಲ್ಲಿ ಉತ್ಸವ ಮಂಟಪದ ನಿರ್ಮಾಣ.

೧೫೨೨ ಕೃಷ್ಣದೇವರಾಯನಿಂದ ಸಿಂಹಳದ ವಿಜಯ (?).

೧೫೨೩ ಸಾಳ್ವ ತಿಮ್ಮನ ನೇತೃತ್ವದಲ್ಲಿ ವಿಜಯನಗರದ ಸೈನ್ಯ ಪೋಂಡದ ಮೇಲೆ ಏರಿ ನಡೆದಾಗ ಬಿಜಾಪುರದ ಅಸದ್ ಖಾನನಿಂದ ಪರಾಭವಗೊಂಡುದು;

— ಕೃಷ್ಣದೇವರಾಯನ ಬಿಜಾಪುರದ ದಾಳಿ;

— ಆದಿಲ್‌ಖಾನನಿಂದ ಕೃಷ್ಣದೇವರಾಯನು ಕಲಬುರಿಗೆಯನ್ನು ವಶಪಡಿಸಿ ಕೊಂಡುದು; ಮೂವರು ಬಹಮನೀ ರಾಜಪುತ್ರರನ್ನು ಸೆರೆಯಿಂದ ಬಿಡಿಸಿ ಹಿರಿಯನನ್ನು ಬಹಮನೀ ಅರಸನನ್ನಾಗಿ ಮಾಡಿದುದು.

೧೫೨೪ ಕೃಷ್ಣದೇವರಾಯನು, ತನ್ನ ಮಗ ತಿರುಮಲರಾಯನನ್ನು, ಸಹರಾಜ ನೆಂದು (co-ruler) ಘೋಷಿಸಿದ್ದು.

೧೫೨೪ ಬಿಜಾಪುರದ ಅಸದ್‌ಖಾನ್ ಗೋವೆಯನ್ನು ವಶಪಡಿಸಿಕೊಂಡುದು;

೧೫೨೪ ಕೃಷ್ಣದೇವರಾಯನು, ಸಲೆ ತಿರುಮಲ ಮಹಾರಾಯನಪುರವನ್ನು ಕಟ್ಟಿಸಿದುದು;

— ಕೃಷ್ಣದೇವರಾಯನಿಂದ, ಅನಂತಪದ್ಮನಾಭ ದೇವಾಲಯದ ನಿರ್ಮಾಣ;

— ಇಸ್ಮಾಯಿಲ್ ಆದಿಲ್‌ಶಹಾನೊಡನೆ, ಬುರ್‍ಹಾನ್ ನಿಜಾಮಶಹಾನ ಸೋದರಿ ಮರ್‍ಯಂಬೇಗಂಳ ಮದುವೆ.

೧೫೨೫ ಕೃಷ್ಣದೇವರಾಯನ ಮಗ ತಿರುಮಲರಾಯನ ಮರಣ;
ರಾಯಸಂ ಕೊಂಡಮರಸನ ಮರಣ.

ಸುಮಾರು ೧೫೨೫ ನಂಜುಂಡ ಕವಿಯಿಂದ 'ಕುಮಾರರಾಮನ ಸಾಂಗತ್ಯ'ದ ರಚನೆ.

೧೫೨೫–೨೬ ಆದಿಲ್‌ಶಹಾ ರಾಯಚೂರನ್ನು ವಶಪಡಿಸಿಕೊಳ್ಳಲು ವ್ಯರ್ಥ ಪ್ರಯತ್ನ ನಡೆಸಿದ್ದು,

೧೫೨೬ ವೈಯಪ್ಪನು ಶೆಂಜಿಯ ನಾಯಕನಾದುದು.

೧೫೨೮ (ಎಪ್ರೀಲ್) ವಿಜಯನಗರದಲ್ಲಿ ಲಕ್ಷ್ಮೀನರಸಿಂಹ (ಉಗ್ರನರಸಿಂಹ) ಮೂರ್ತಿಯ ಪ್ರತಿಷ್ಠಾಪನೆ;

೧೫೨೯ ಕೃಷ್ಣದೇವರಾಯನ ಮರಣ,

— ಮಧುರೆಯಲ್ಲಿ, ವಿಶ್ವನಾಥನಾಯಕನು, 'ಮಧುರೆಯನಾಯಕ' ರಾಜ್ಯವನ್ನು ಸ್ಥಾಪಿಸಿದನು.

— ಪೋರ್ತುಗೀಜ ಪ್ರವಾಸಿ ಕಾಸ್ಟನ್‌ಹೇಡ ಭಾರತಕ್ಕೆ ಬಂದುದು,

೨೦–೧೧–೧೫೨೯ ಕಾಳಹಸ್ತಿಯಲ್ಲಿ ಅಚ್ಯುತರಾಯನ ಪಟ್ಟಾಭಿಷೇಕ,

೧೫೨೯ ಅಚ್ಯುತರಾಯನು ಪ್ರತಾಪರುದ್ರ ಗಜಪತಿಯನ್ನು ಸೋಲಿಸಿದುದು.

೧೫೨೯–೩೦ ಕುಲಿಕುತುಬ್‌ಶಹನು, ಕೊಂಡವೀಡನ್ನು ವಶಪಡಿಸಿಕೊಳ್ಳಲೆತ್ನಿಸಿದಾಗ, ವಿಜಯನಗರದಿಂದ ಸೋಲನ್ನನುಭವಿಸಿದ್ದು.

ಸುಮಾರು ೧೫೩೦ ವೀರಭದ್ರನಿಂದ 'ವೀರಭದ್ರವಿಜಯ', ಲಿಂಗಮಂತ್ರಿಯಿಂದ 'ಕಬ್ಬಿಗರ ಕೈಪಿಡಿ' ರಚನೆ;

— ತೆನಾಲಿ ರಾಮಲಿಂಗಕವಿ, ತನ್ನ 'ಉದ್ಭಟಾರಾಧ್ಯ ಚರಿತಮು' ಗ್ರಂಥವನ್ನು ಕೊಂಡವೀಡಿನ ಯೋಸುದೇಚನಿಗೆ ಅರ್ಪಿಸಿದ್ದು.

೧೫೩೦ ಇಸ್ಮಾಯಿಲ್ ಆದಿಲ್‌ಶಹನು, ಅಲ್ಲಾವುದ್ದೀನ ಇಮಾದ್‌ಶಹ ಹಾಗೂ ಅಮೀರ್ ಬಾರಿದ್‌ರ ಸಹಾಯದಿಂದ ರಾಯಚೂರು, ಮುದಗಲ್ ಕೋಟೆಗಳನ್ನು ಗೆದ್ದುದು;

— ಮಂಗಳೂರನ್ನು ಪೋರ್ತುಗೀಜರು ಸುಟ್ಟದ್ದು.

೧೫೩೦–೩೧ ಸಲಕರಾಜ ಚಿನ್ನತಿರುಮಲನು ಚಂದ್ರಗಿರಿ ರಾಜ್ಯವನ್ನು ಆಳುತ್ತಿದ್ದುದು.

೧೫೩೧ ಕುಲಿಕುತುಬ್‌ಶಹನು, ವಿಜಯನಗರದಿಂದ ಕೊಂಡಪಲ್ಲಿಯನ್ನು ವಶಪಡಿಸಿಕೊಂಡದ್ದು;

— ಅಚ್ಯುತರಾಯನು ಕೊಂಡಪಲ್ಲಿಯನ್ನು ತಿರುಗಿ ಪಡೆದದ್ದು;

— ತಿರುಮಲದೇವಿಅಮ್ಮನ ಪಟ್ಟಣದಲ್ಲಿದ್ದ ಗೌರೇಶ್ವರ ದೇವರಿಗೆ ನಾನಾದೇಶಿಗಳು ದತ್ತಿಬಿಟ್ಟದ್ದು.

೧೫೩೨ (ಜನವರಿ-ಜುಲೈ) ಶಾಲುವನಾಯಕ (ಶೆಲ್ಲಪ್ಪ)ನ ದಂಗೆ;

— ತಿರುವಾಡಿಯ ಅರಸ ಉದಯಮಾರ್ತಾಂಡವರ್ಮ ಮತ್ತು ತುಂಬಿಚಿನಾಯಕರು ಶಾಲುವನಾಯಕನ ಪಕ್ಷ ಸೇರಿದುದು.

— ಶಾಲುವನಾಯಕನ ದಂಗೆ ಅಡಗಿಸಲು ಅಚ್ಯುತರಾಯನು ಕಾಳಹಸ್ತಿ, ಕಾಂಚಿ, ತಿರುವಣ್ಣಾಮಲೈ ಮಾರ್ಗವಾಗಿ ಶ್ರೀರಂಗಂ ತಲುಪಿದ್ದು;

— ತಾಮ್ರಪರ್ಣಿಯುದ್ಧ;

— ತಿರುವಾಡಿಯ ಅರಸು ಉದಯಮಾರ್ತಾಂಡವರ್ಮ, ಶಾಲುವನಾಯಕ ಹಾಗೂ ತುಂಬಿಚಿನಾಯಕರ ಸೋಲು.

೧೫೩೨ ಅಚ್ಯುತರಾಯನು, ತಿರುವಾಡಿ ಪ್ರದೇಶದಿಂದ, ವಿಜಯಂಸಾಧಿಸಿ ಹಿಂತಿರುಗಿದ ಸಲಕರಾಜು ಚಿನ್ನತಿರುಮಲನನ್ನು ಸಂಭ್ರಮದಿಂದ ಸ್ವಾಗತಿಸಿದುದು.

— ಅಚ್ಯುತರಾಯನು ಶ್ರೀರಂಗ ಪಟ್ಟಣವನ್ನು ಸಂದರ್ಶಿಸಿದ್ದು;

— ವಿಜಯನಗರದ ವಿಠ್ಠಲ ಮಂದಿರದಲ್ಲಿ ವ್ಯಾಸರಾಯರು ಯೋಗವರದ ನರಸಿಂಹ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದು;

— ಶೆಚ್ಚಪ್ಪನಾಯಕನಿಂದ ತಂಜಾವೂರಿನಲ್ಲಿ ನಾಯಕವಂಶದ ಸ್ಥಾಪನೆ.

೧೫೩೩ (ಜನೆವರಿ) ಅಚ್ಯುತರಾಯನು ತನ್ನ ರಾಣಿ ವರದಾಂಬಿಕಾದೇವಿ ಹಾಗೂ ಮಗ ಕುಮಾರವೆಂಕಟನೊಂದಿಗೆ ತಿರುಪತಿಗೆ ದರ್ಶನವಿತ್ತುದು.

೧೫೩೩ ತಮಿಳು ಪ್ರಾಂತಗಳಿಗೆ ಸಲಕರಾಜು ಚಿನ್ನತಿರುಮಲೆನು ಮಹಾಮಂಡಳೇಶ್ವರನೆಂದು ನೇಮಕಗೊಂಡುದು;

— ಗೇರುಸೊಪ್ಪೆಯ ಅಭಿನವವಾದಿವಿದ್ಯಾನಂದನಿಂದ 'ಕಾವ್ಯಸಾರ'ದ ರಚನೆ;

— ಅಚ್ಯುತರಾಯನು 'ಸುವರ್ಣಮೇರು' ದಾನಮಾಡಿದ ನೆನಪಿಗಾಗಿ, ಓದೂರು ತಿರುಮಲಮ್ಮನು ಸಂಸ್ಕೃತದಲ್ಲಿ ಪದ್ಯ ರಚಿಸಿದ್ದು.

೨೩–೧೨–೧೫೩೩ ತಿರುಪತಿಗೆ ಅಚ್ಯುತರಾಯನ ಭೆಟ್ಟಿ.

೧೫೩೪ ವಿಜಯವಾಡದಲ್ಲಿ ಅಚ್ಯುತರಾಯ.

— ಮಹಾಮಂಡಳೇಶ್ವರ ಹಿರಿಯ ತಿರುಮಲರಾಜನು ರಾಜಧಾನಿಯಲ್ಲಿ ತಿರುವೇಂಗಳನಾಥ (ಅಚ್ಯುತರಾಯ) ಗುಡಿ ಕಟ್ಟಿಸಿದ್ದು.

— ಗಂಧದ ತಿಪ್ಪಿಸೆಟ್ಟಿ ಆಳ್ವಾರರ ವಿಗ್ರಹಗಳನ್ನು ವಿಠ್ಠಲ ಮಂದಿರದಲ್ಲಿ ಸ್ಥಾಪಿಸಿದ್ದು.

ಸುಮಾರು ೧೫೩೫ ಸಾಳ್ವ ತಿಮ್ಮರಸನ ಮರಣ;

— 'ರಾಯವಾಚಕಂ' ಗ್ರಂಥದ ರಚನೆ.

೧೫೩೬ ನುನೊ ಡಿ ಕುನ್ಹನು ರಾಚೋಲದಲ್ಲಿ ಕೋಟೆ ಕಟ್ಟಿಸಿದ್ದು, ಅದನ್ನು ಇಬ್ರಾಹಿಂ ಆದಿಲ್‌ಶಹಾನು ನಾಶಪಡಿಸಿದ್ದು.

೧೫೩೭ ಆದವಾನಿಯನ್ನು ವಶಪಡಿಸಿಕೊಳ್ಳಲು ಇಬ್ರಾಹಿಂ ಆದಿಲ್‌ಶಹಾನ ವ್ಯರ್ಥ ಪ್ರಯತ್ನ.

— ಮೊದಲನೇ ಕೆಂಪೇಗೌಡನಿಂದ ಬೆಂಗಳೂರು ನಗರದ ಸ್ಥಾಪನೆ;

— ಅಚ್ಯುತರಾಯನು ಪುನಃ ತಿರುಪತಿಯನ್ನು ಸಂದರ್ಶಿಸಿದ್ದು.

೧೫೩೯ (ಮೇ) ಚಿದಂಬರಂನ. ನಟರಾಜ ದೇವಸ್ಥಾನದ ಆವರಣದಲ್ಲಿ ಅಚ್ಯುತರಾಯನಿಂದ 'ತಿಳ್ಳೈಗೋವಿಂದರಾಜದೇವರ' ಮೂರ್ತಿ ಸ್ಥಾಪನೆ.

— ವಿಜಯನಗರದ ಸೈನ್ಯ ಏಲಂ (ಶ್ರೀಲಂಕಾ) ವನ್ನು ಜಯಿಸಿದ್ದು;

೧೫೪೧ ರಾಜಧಾನಿಯ ಪೆನುಗೊಂಡೆದ್ವಾರದ ಹತ್ತಿರ, ಹಿರಿಯ ಅಬ್ಬರಾಜನ ಮಗ ತಿಮ್ಮರಾಜನು ರಂಗನಾಥ ದೇವಾಲಯ ಕಟ್ಟಿಸಿದ್ದು,

ಸುಮಾರು ೧೫೪೧ ಸಾಳ್ವಗೋವಿಂದರಾಜನ ಮರಣ.

೧೫೪೨ ಅಚ್ಯುತರಾಯನ ಮರಣ;

— ಪೋರ್ತುಗೀಜ ಗವ್ಹರ್ನರ್ ಆಫಾನ್ಸೊ ಡಿ ಸೌಸನು ಭಟ್ಕಳವನ್ನು ಮುತ್ತಿದುದು.

— ಸಂತ ಫ್ರಾನ್ಸಿಸ್ ಕ್ಸೇವಿಯರ್ ಭಾರತಕ್ಕೆ ಆಗಮಿಸಿದುದು;

— ವೆಂಕಟಾದ್ರಿಯ ವಶದಲ್ಲಿದ್ದ ಆದವಾನಿಯನ್ನು ಬಿಜಾಪುರದ ಅಸದ್ ಖಾನನು ಹಿಡಿದುಕೊಳ್ಳುವಲ್ಲಿ ವಿಫಲನಾದುದು;

— ವೆಂಕಟಾದ್ರಿಯ ಸೈನ್ಯದ ಮೇಲೆ ಅಸದ್‌ಖಾನನ ಆಕಸ್ಮಿಕ ದಾಳಿ; ವೆಂಕಟಾದ್ರಿಯ ಪಲಾಯನ, ವೆಂಕಟಾದ್ರಿಯ ಮನೆಯವರ ಬಂಧನ. ಅಸದ್‌ಖಾನನೊಂದಿಗೆ ಒಪ್ಪಂದ ಮತ್ತು ವೆಂಕಟಾದ್ರಿಯ ಪರಿವಾರದವರ ವಿಮೋಚನೆ.

— ಮೊದಲನೆಯ ವೆಂಕಟನ ಸಿಂಹಾಸನಾರೋಹಣ:

— ಸಲಕರಾಜು ಚಿನ್ನತಿರುಮಲನು ರಾಜಪ್ರತಿನಿಧಿಯಾಗಿ ನೇಮಕವಾದುದು;

— ಸಲಕರಾಜು ಚಿನ್ನತಿರುಮಲನಿಂದ ಮೊದಲನೆಯ ವೆಂಕಟನ ಕೊಲೆ;

— ಅಳಿಯ ರಾಮರಾಯನು ಸಲಕರಾಜು ಚಿನ್ನತಿರುಮಲನಿಂದ ಪೆನುಗೊಂಡೆಯನ್ನು ಹಿಡಿದುಕೊಂಡದ್ದು.

೧೫೪೨–೪೩ ಗುಡಿಕೋಟೆಯ ಮೇಲೆ ಚಿನ್ನತಿರುಮಲನು ದಂಡೆತ್ತಿ ಹೋದುದು;

— ಕೋಮಲಿ ಕದನದಲ್ಲಿ ಅಳಿಯ ರಾಮರಾಯನು ಚಿನ್ನತಿರುಮಲನನ್ನು ಸೋಲಿಸಿದ್ದು;

— ರಾಮರಾಯನು ಕಂದನವೋಲು (ಕರ್ನೂಲು) ಪ್ರಾಂತವನ್ನು ಹೊಕ್ಕದ್ದು.

— ಬೇತಂ ಚರ್ಲ ಮತ್ತು ಜೂಟೂರ್ ಯುದ್ಧಗಳಲ್ಲಿ ಚಿನ್ನತಿರುಮಲನ ಸೋಲು ಹಾಗೂ ರಾಮರಾಯನು ಕಂದನವೋಲನ್ನು ಗೆದ್ದುದು.

೧೫೪೩ ಬೆಡಗಲ್ಲು ಯುದ್ಧದಲ್ಲಿ ಚಿನ್ನತಿರುಮಲನು ರಾಮರಾಯನಿಂದ ಸೋಲನ್ನನುಭವಿಸಿದ್ದು;

— ಆದವಾನಿಯನ್ನು ರಾಮರಾಯನು ವಶಪಡಿಸಿಕೊಂಡದ್ದು;

೧೫೪೩ (ಸೆಪ್ಟಂಬರ) ವಿಜಯನಗರದ ಕಡೆಗೆ ರಾಮರಾಯನು ನಡೆದುದು;

— ತುಂಗಭದ್ರಾ ಕದನದಲ್ಲಿ ರಾಮರಾಯನಿಂದ ಚಿನ್ನತಿರುಮಲನ ಸೋಲು ಹಾಗೂ ಸಾವು.

೭-೧೧-೧೫೪೩ ರಾಮರಾಯನು ಸದಾಶಿವನ ಜೊತೆ ವಿಜಯನಗರ ಹೊಕ್ಕದ್ದು;

— ಸದಾಶಿವರಾಯನ ಸಿಂಹಾಸನಾರೋಹಣ.

೧೫೪೩-೧೫೫೦ ರಾಮರಾಯನು ರಾಜಪ್ರತಿನಿಧಿಯಾಗಿ ಆಳಿದಕಾಲ.

೧೫೪೩ ಬಿಜಾಪುರದ ವಿರುದ್ಧ ಅಹಮದನಗರ ಮತ್ತು ಗೋಲ್ಕೊಂಡಗಳೊಂದಿಗೆ ರಾಮರಾಯನ ಮೈತ್ರಿ;

— ಅಹಮದನಗರದಿಂದ ಸೊಲ್ಲಾಪುರ, ರಾಮರಾಯನಿಂದ ರಾಯಚೂರು ಪ್ರದೇಶ ವಶ.

೧೫೪೪ ತಿರುಮಲೈಯನ್ನು ಕೊಳ್ಳೆ ಹೊಡೆಯಲು ಪೋರ್ತುಗೀಜ ಗವ್ಹರ್ನರ ಮಾರ್ಟಿನ್ ಅಲ್ಫಾನ್ಸೊ ಡಿಸೌಸನಿಂದ ವ್ಯರ್ಥ ಪ್ರಯತ್ನ.

೧೬-೬-೧೫೪೪ ವಿಜಯನಗರದ ವಿಠ್ಠಲರಾಯನು ಟ್ರಾವಂಕೋರ್ ಪ್ರದೇಶದ ಮೇಲೆ ದಾಳಿ ಮಾಡಿದಾಗ, ಜನರು ಅಲ್ಲಿಂದ ಓಡಿಹೋದಂದಾಗಿ ಸಂತ ಫ್ರಾನ್ಸಿಸ್ ಕ್ಸೇವಿಯರನು ತನ್ನ ಪತ್ರವೊಂದರಲ್ಲಿ ಉಲ್ಲೇಖಿಸಿದುದು.

೧೫೪೪ (ಅಗಸ್ಟ) ವಿಠ್ಠಲರಾಯನು ಟ್ರಾವಂಕೋರ್ ರಾಜನನ್ನು ಕೊಟ್ಟೂರ ಕದನದಲ್ಲಿ ಸೋಲಿಸಿ. ಪುಣ್ಣೈಕಾಯಲ್‌ನಲ್ಲಿ ಪೋರ್ತುಗೀಜರಿಗೆ ಸೇರಿದ ಪ್ರದೇಶಗಳನ್ನು ಸುಟ್ಟು, ಟುಟಿಕೋರಿನ್ ವಶಪಡಿಸಿಕೊಂಡು, ತನ್ನ ಅಳಿಯನನ್ನು ಪೋರ್ತುಗೀಜರ ಸೆರೆಯಿಂದ ವಿಮುಕ್ತಿಗೊಳಿಸಿದ್ದು,

೧೫೪೪-೧೫೬೫ ಸದಾಶಿವರಾಯನು ಕೆಳದಿಯ ಅರಸನಾಗಿ ಆಳಿದಕಾಲ.

೧೫೪೫ ಮಾರ್ಟಿನ್ ಅಫಾನ್ಸೊ ಡಿಸೌಸನ ಸ್ಥಾನದಲ್ಲಿ ಜೋ ಡಿ ಕಾಸ್ಟ್ರೊನನ್ನು ಪೋರ್ತುಗೀಜ ಗವ್ಹರ್ನರನೆಂದು ನೇಮಿಸಿದ್ದು,

೧೫೪೫ ದಳವಾಯಿ ಜಂಗಮಯ್ಯನು ರಾಜಧಾನಿಯಲ್ಲಿ ಮುಂದು ವೀರಣ್ಣ (ಉದ್ದಾನ ವೀರಭದ್ರ)ನ ದೇವಾಲಯ ಕಟ್ಟಿದ್ದು.

೧೬-೨-೧೫೪೬ ಪೋರ್ತಗೀಜ ಮತ್ತು ವಿಜಯನಗರಗಳ ನಡುವೆ ಸಂಧಿ;

— ಪೋರ್ತುಗೀಜರು ಸಾಲಸೆಟಿ ಮತ್ತು ಬಾರ್ದೇಜಗಳ ಒಡೆಯರೆಂದು ವಿಜಯನಗರ ಒಪ್ಪಿಕೊಂಡದ್ದು,

೧೯-೯-೧೫೪೭ ಪೋರ್ತುಗೀಜರು ಮತ್ತು ವಿಜಯನಗರಗಳ ನಡುವೆ ಸಂಧಿ;

೧೫೪೭ ಪೋರ್ತುಗೀಜರು ಕುದುರೆಗಳನ್ನು ವಿಜಯನಗರಕ್ಕೆ ಮಾರುವುದಾಗಿಯೂ ಮತ್ತು ವಿಜಯನಗರವು ತನ್ನ ವಿದೇಶಿ ವ್ಯಾಪಾರವನ್ನು ಪೋರ್ತುಗೀಜ ಬಂದರುಗಳ ಮೂಲಕ ಮಾಡುವುದಾಗಿಯೂ ಉಭಯತರು ಒಪ್ಪಿ-ಕೊಂಡುದು.

೬-೧೦-೧೫೪೭ ಬಿಜಾಪುರದ ವಿರುದ್ಧ, ಪೋರ್ತುಗೀಜರು ಮತ್ತು ಅಹಮದ-ನಗರದ ಮಧ್ಯೆ ಸ್ನೇಹ ಒಪ್ಪಂದ.

೧೫೪೭ ಅಚ್ಯುತರಾಯನ ದಂಡನಾಯಕ ವಿಠ್ಠಲನು ತಂಜಾವೂರಿನ ಸೋಲಗನನ್ನು ಸದೆಬಡೆದುದು.

೧೫೪೭ ಇಬ್ರಾಹಿಂ ಆದಿಲ್‌ಶಹಾನು ಸಾಲಸೆಟಿ ಮತ್ತು ಬಾರ್ದೇಜಗಳನ್ನು ವಶಪಡಿಸಿಕೊಳ್ಳಲೆತ್ನಿಸಿದಾಗ ಪೋರ್ತುಗೀಜರಿಂದ ಪರಾಜಿತನಾದುದು.

೨೨-೮-೧೫೪೮ ಇಬ್ರಾಹಿಂ ಆದಿಲ್‌ಶಹಾನು ಸಾಲಸೆಟಿ ಮತ್ತು ಬಾರ್ದೇಜಗಳು ಪೋರ್ತುಗೀಜರ ಸ್ವತ್ತುಗಳೆಂದು ಒಪ್ಪಿಕೊಂಡದ್ದು.

೧೫೪೮ ರಾಮರಾಯನ ಸಹಾಯದಿಂದ ಬುರ್ಹಾನ್ ನಿಜಾಂ ಶಹನು ಕಲ್ಯಾಣವನ್ನು ವಶಪಡಿಸಿಕೊಂಡುದು.

೧೫೪೮-೪೯ ಬಿಜಾಪುರದ ಅಸದ್‌ಖಾನನ ಮರಣ,

೧೫೪೯ ದೊನೇರು ಕೋನೇರಿನಾಥನ 'ಬಾಲಭಾಗವತಂ' ಗ್ರಂಥ ರಚನೆಯು ಮುಗಿದುದು.

೧೫೪೯ ಬುರ್ಹಾನ್ ನಿಜಾಂ ಶಹ ಮತ್ತು ರಾಮರಾಯನ ನಡುವೆ ಸ್ನೇಹ, ಒಪ್ಪಂದ.

— ಬಿಜಾಪುರ ಮತ್ತು ಬೀದರಗಳ ಮಧ್ಯೆ ಸ್ನೇಹ ಒಪ್ಪಂದ.

— ಸದಾಶಿವರಾಯನಿಂದ ಜಂಬುಕೇಶ್ವರ ಗುಡ್ಡದ ಮೇಲಿನ ಜಂಬುಕೇಶ್ವರ ದೇವರಿಗೆ ದತ್ತಿಬಿಟ್ಟದ್ದು.

೨೩-೧೦-೧೫೪೯ ಬುರ್ಹಾನ್ ನಿಜಾಂ ಶಹಾ ಮತ್ತು ರಾಮರಾಯನ ಸೈನ್ಯಗಳು ಕಲ್ಯಾಣದ ಹತ್ತಿರ ಇಬ್ರಾಹಿಂ ಆದಿಲ್‌ಶಹನ ಸೈನ್ಯದ ಮೇಲೆ ದಾಳಿ ಮಾಡಿದುದು;

— ಅಹಮದನಗರದಿಂದ ಕಲ್ಯಾಣದ ವಶ.

೧೫೫೦ ಜಮ್‌ಷೀದ್ ಕುತ್ಬ್ ಶಹಾನ ಮರಣ.

ಸುಮಾರು ೧೫೫೦ ಸಾಳ್ವನಿಂದ 'ಭಾರತ', ಗುರುಲಿಂಗ ವಿಭುವಿನಿಂದ 'ಭಿಕ್ಷಾಟನ ಚರಿತ್ರೆ', ಬಸವಾಂಕನಿಂದ 'ಉದ್ಭಟದೇವ ಚರಿತೆ, ಪೆರಿಯಾ ಪಟ್ಟಣದ ದೊಡ್ಡಯ್ಯನಿಂದ 'ಚಂದ್ರಪ್ರಭಜಿನ ಪುರಾಣ' ಮತ್ತು ಚನ್ನಬಸವಾಂಕನಿಂದ 'ಮಹಾದೇವಿಯಕ್ಕನ ಪುರಾಣ'ಗಳ ರಚನೆ,

೧೫೫೧ ವಿಠ್ಠಲರಾಯನ ಸೈನಿಕರಿಂದ ಪೋರ್ತುಗೀಜ ಜೆಸುಯಿಟ್ ಪಾದ್ರಿ ಪಾವುಲೋ ಡಿ ವಲ್ಲೆಯ ಬಂಧನ ಹಾಗೂ ಪೆರವರಿಂದ ಅವನ ಬಿಡುಗಡೆ,

೧೫೫೨ ರಾಮರಾಯ ಮತ್ತು ಅಹಮದನಗರದ ಸೈನಿಕರಿಂದ ಸೋಲ್ಲಾಪುರದ ವಶ;

— ರಾಯಚೂರು ಮತ್ತು ಮುದಗಲ್ ವಿಜಯನಗರದ ವಶದಲ್ಲಿ.

೧೫೫೩ (ಮೋ)ಇಜಿಸಾಲಿಯ ನೇತೃತ್ವದಲ್ಲಿ ಮುಸ್ಲೀಮರಿಂದ ಪುಣ್ಣೈಕಾಯಲ್‌ನ ವಶ.

— ವಿಠ್ಠಲರಾಯನು ಕ್ಯಾಪ್ಟನ್ ಕುಟಿನೋನ ಹೆಂಡತಿ ಮಕ್ಕಳನ್ನು ಸೆರೆಹಿಡಿದು ಟುಟಿಕೋರಿನ್‌ನಲ್ಲಿ ಬಂಧನದಲ್ಲಿಟ್ಟದ್ದು;

— ಕ್ಯಾಪ್ಟನ್ ಕುಟಿನೋ ಮತ್ತು ಅವನ ಕುಟುಂಬದವರನ್ನು, ರಾಮರಾಯನು ಪೋರ್ತುಗೀಜ ಅಧಿಕಾರಿ ಕ್ಯಾಪ್ಟನ್ ಗಿಲ್ ಫರ್ನಾಂಡೀಜ್ ಡಿ ಕಾರ್ವಲ್ಹೊನ ವಿನಂತಿಯ ಮೇರೆಗೆ ಬಿಡುಗಡೆ ಮಾಡಿದ್ದು.

೧೫೫೩ ಬುರ್ಹಾನ್ ನಿಜಾಂ ಶಹನ ಮರಣ ಮತ್ತು ಹುಸೇನ್ ನಿಜಾಂಶಹನ ಸಿಂಹಾಸನಾರೋಹಣ.

೧೫೫೪ ಸದಾಶಿವಯೋಗಿಯಿಂದ 'ರಾಮನಾಥವಿಲಾಸ'ದ ರಚನೆ.

೧೫೫೫ ಇಬ್ರಾಹಿಂ ಆದಿಲ್‌ಶಹನ ವಿರುದ್ಧ, ಪೋರ್ತುಗೀಜರು ಪೊಂಡಾದಲ್ಲಿ ಅಬ್ದುಲ್ಲನನ್ನು ಭಿಜಾಪುರದ ಸುಲ್ತಾನನೆಂದು ಮನ್ನಿಸಿದ್ದು,

೧೫೫೫-೫೬ ಇಬ್ರಾಹಿಂ ಆದಿಲ್‌ಶಹಾನು ಪೊಂಡಾವನ್ನು ಪುನಃ ವಶಪಡಿಸಿಕೊಂಡದ್ದಲ್ಲದೇ ಅಬ್ದುಲ್ಲನನ್ನು ಸೆರೆಹಿಡಿದದ್ದು.

೧೫೫೬ ಪೋರ್ತುಗೀಜರಿಂದ ಗೋವೆಯಲ್ಲಿ ಪ್ರಥಮ ಮುದ್ರಣಾಲಯದ ಸ್ಥಾಪನೆ,

೧೫೫೭ ಹುಸೇನ್ ನಿಜಾಂಶಹನು ಗುಲ್ಬರ್ಗಾವನ್ನು ಮುತ್ತಿದುದು.

— ರಾಮರಾಯನನ್ನು ಇಬ್ರಾಹಿಂ ಆದಿಲ್‌ಶಹನು ಸಹಾಯಕ್ಕಾಗಿ ಯಾಚಿಸಿದ್ದು;

— ರಾಮರಾಯನು, ಕೃಷ್ಣಾ ಮತ್ತು ಭೀಮಾ ನದಿಗಳ ಸಂಗಮಸ್ಥಳದಲ್ಲಿ, ಇಬ್ರಾಹಿಂ ಆದಿಲ್‌ಶಹ, ಹುಸೇನನಿಜಾಂಶಹ ಹಾಗೂ ಇಬ್ರಾಹಿಂ ಕುತ್ಬ್‌ಶಹರೊಡನೆ ಸಮಾಲೋಚಿಸಿ ಬಿಕ್ಕಟ್ಟನ್ನು ಪರಿಹರಿಸಿದ್ದು;

— ವಿಜಯನಗರ ಮತ್ತು ಆದಿಲ್‌ಶಹರ ನಡುವೆ ಸ್ನೇಹ ಒಪ್ಪಂದ;

— ಅಲಿ ಆದಿಲ್‌ಶಹನಿಂದ ಧಾರವಾಡದ ಕೋಟೆಯ ನಿರ್ಮಾಣ;

— ರತ್ನಾಕರವರ್ಣಿಯಿಂದ 'ಭರತೇಶ ವೈಭವ'ದ ರಚನೆ,

೧೪-೧೦-೧೫೫೮ ರಾಮರಾಯನಿಂದ ಅಹಮದನಗರದ ಮೇಲೆ ಮೊದಲದಾಳಿ;

— ರಾಮರಾಯ ಮತ್ತು ಅಲಿ ಆದಿಲ್‌ಶಹರ ಕೈಯಲ್ಲಿ ನಿಜಾಂಶಹನ ಸೋಲು;

— ಅಹಮದನಗರದ ಕೊಳ್ಳೆ,

೧೫೫೯ ತ್ರಾವಣಕೋರ ಸ್ವಾತಂತ್ರ್ಯ ಘೋಷಿಸಿದ್ದು;

— ನೇಮಣ್ಣನಿಂದ 'ಜ್ಞಾನಭಾಸ್ಕರ ಚರಿತೆ'ಯ ರಚನೆ.

ಸುಮಾರು ೧೫೬೦ ವಿರಕ್ತ ತೋಂಟದಾರ್ಯನಿಂದ 'ಪಾಲ್ಕುರಿಕೆ ಸೋಮನಾಥೇಶ್ವರ ಪುರಾಣ', ತೆನಾಲಿರಾಮಲಿಂಗ ಕವಿಯಿಂದ 'ಪಾಂಡುರಂಗ ಮಹಾತ್ಮೆ' ಮತ್ತು 'ಘಟಿಕಾಚಲ ಮಹಾತ್ಮೆ'ಗಳ ರಚನೆ.

೧೫೬೦ ಅಲೆಕ್ಸ್ ಡೈಯಸ್ ಫಾಲ್ಕಾವ್ ಗೋವೆಯ ಪಾಪಂಡವಿಚಾರಣಾಧಿಕಾರಿಯಾಗಿ ನೇಮಕ,

೧೫೬೧ ಅಲಿ ಆದಿಲ್‌ಶಹನಿಂದ ಬಿಜಾಪುರದಲ್ಲಿ ಗಗನಮಹಲ್ ಕಟ್ಟಡ ನಿರ್ಮಾಣ.

೧೫೬೧-೬೨ ರಾಜಧಾನಿಯಲ್ಲಿ ಸದಾಶಿವರಾಯನು ವಿಷ್ಣುದೇವಾಲಯವೊಂದನ್ನು ನಿರ್ಮಿಸಿದ್ದು.

೧೫೬೩ ಇಬ್ರಾಹಿಂ ಕುತ್ಬ್ ಶಹ ಮತ್ತು ಹುಸೇನ್ ನಿಜಾಂಶಹರ ನಡುವೆ ಸ್ನೇಹ, ಒಪ್ಪಂದ ;

— ಕಲ್ಯಾಣದ ಮೇಲೆ ಅವರ ದಾಳಿ;

೧೫೬೩ ರಾಮರಾಯ ಮತ್ತು ಅಲಿ ಬರೀದರ ಸಹಾಯದೊಂದಿಗೆ ಅಲಿ ಆದಿಲ್ ಶಹನು ಕಲ್ಯಾಣವನ್ನು ಮುತ್ತಿ, ಹುಸೇನ ನಿಜಾಂಶಹನನ್ನು ಸೋಲಿಸಿ, ಅಹಮದನಗರದ ಕಡೆ ಮುನ್ನಡೆದು, ಅಹಮದನಗರವನ್ನು ವಶಪಡಿಸಿಕೊಂಡು ಕೊಳ್ಳೆ ಹೊಡೆದುದು.

ಸುಮಾರು ೧೫೬೪ ಚಿನ್ನಕೇಶವಪ್ಪನಾಯಕನು ತುಂಬಿಚಿನಾಯಕನ ದಂಗೆಯನ್ನು ಹತ್ತಿಕ್ಕಿದ್ದು.

೧೫೬೪ ಪುರಂದರದಾಸರ ಮರಣ;

— ಹುಸೇನ ನಿಜಾಂಶಹನ ಮಗ ಮುರ್ತಾಜನು ಅಲಿ ಆದಿಲ್‌ಶಹನ ಸೋದರಿಯನ್ನು ಮದುವೆಯಾದದ್ದು;

— ಬಿಜಾಪುರ, ಬೀದರ, ಅಹಮದನಗರ ಮತ್ತು ಗೋಲ್ಕೊಂಡಗಳು ವಿಜಯನಗರದ ವಿರುದ್ಧ ಹೋರಾಡಲು ಒಪ್ಪಂದ ಮಾಡಿಕೊಂಡದ್ದು.

೨೪–೧೨–೧೫೬೪ ಬೀದರ, ಬಿಜಾಪುರ, ಅಹಮದನಗರ ಮತ್ತು ಗೋಲ್ಕೊಂಡಗಳ ಸೈನ್ಯಗಳು ಬಿಜಾಪುರದಿಂದ ಕೃಷ್ಣಾನದಿ ತೀರದ ಕಡೆ ಮುನ್ನಡೆದುದು.

೨೩–೧–೧೫೬೫ ವಿಜಯನಗರ ಹಾಗೂ ಮುಸ್ಲಿಮ ಸೈನ್ಯಗಳ ನಡುವೆ ಕದನ;

— ರಾಮರಾಯನ ಸೆರೆ ಮತ್ತು ಮರಣ:

— ತಿರುಮಲನು, ಸದಾಶಿವ ಹಾಗೂ ರಾಜ್ಯದ ಬೊಕ್ಕಸದೊಂದಿಗೆ ಪೆನುಗೊಂಡೆಗೆ ಪಲಾಯನ ಮಾಡಿದ್ದು.

(೧೫೬೫ ಫೆಬ್ರುವರಿ-ಜೂನ್) ಮುಸ್ಲಿಂ ಸೈನ್ಯದಿಂದ ರಾಜಧಾನಿ ವಿಜಯನಗರದ ಸುಲಿಗೆ ಮತ್ತು ದೇವಾಲಯಗಳ ನಾಶ.

೧೫೬೫ (ಜುಲೈ) ಮುಸ್ಲಿಂ ಸೈನ್ಯಗಳು ರಾಜಧಾನಿ ವಿಜಯನಗರದಿಂದ ಹೊರಬಿದ್ದುದು.

೧೫೬೫ (ಜುಲೈ-ಆಗಸ್ಟ) ತಿರುಮಲನು ವಿಜಯನಗರಕ್ಕೆ ಹಿಂದಿರುಗಿದುದು.

೧೫೬೬ ಪೋರ್ತುಗೀಜರು ಮಂಗಳೂರನ್ನು ಪುನಃ ಕೊಳ್ಳೆಹೊಡೆದುದು.

೧೫೬೭ ಶ್ರೀರಂಗದಲ್ಲಿ ಸದಾಶಿವ.

— ವಿಜಯನಗರಕ್ಕೆ ಸೀಜರ್ ಫ್ರೆಡ್ರಿಕ್‌ನ ಸಂದರ್ಶನ.

— ಪೋರ್ತುಗೀಜರು ಮಂಗಳೂರನ್ನು ವಶಪಡಿಸಿಕೊಂಡು ಸೇಂಟ್ ಸೆಬಾಸ್ಟಿನ್ ಕೋಟೆ ಕಟ್ಟಿಸಿದ್ದು.

೧೫೬೯ ಪೋರ್ತುಗೀಜರು ಹೊನ್ನಾವರವನ್ನು ವಶಪಡಿಸಿಕೊಂಡು ಕೋಟೆ ಕಟ್ಟಿಸಿದ್ದು.

೧೫೭೦ ರಾಮರಾಜ ಭೂಷಣನಿಂದ 'ವಸುಚರಿತ್ರಂ'ದ ರಚನೆ;

— ತಿರುಮಲನಿಂದ ಸದಾಶಿವರಾಯನ ಕೊಲೆ, ತುಳುವ ವಂಶದ ಅಂತ್ಯ ಹಾಗೂ ಅರವೀಡು ವಂಶದ ಸ್ಥಾಪನೆ.

## ಗ್ರಂಥಋಣ


ಎಸ್ ಕೃಷ್ಣಸ್ವಾಮಿ ಅಯ್ಯಂಗಾರ್ :

'ಎ ಹಿಸ್ಟರಿ ಆಫ್ ತಿರುಪತಿ' (2 vols). ಮದ್ರಾಸ್. ೧೯೪೧.

'ಸಮ್ ಕಾಂಟ್ರಿಬ್ಯೂಶನ್ಸ್ ಆಫ್ ಸೌಥ ಇಂಡಿಯಾ ಟು ಇಂಡಿಯನ್ ಕಲ್ಚರ್', ಕಲ್ಕತ್ತಾ, ೧೯೨೩.

'ಎಟ್ ರಿಮೆಂಬರ್ಡ್ ರೂಲರ್ ಆಫ್ ಎ ಲಾಂಗ್ ಫಾರ್‌ಗಾಟನ್ ಎಂಪಾಯರ್, ಕೃಷ್ಣದೇವರಾಯ ಆಫ್ ವಿಜಯನಗರ' A. D. ೧೫೦೯ ೧೫೩೦, ಮದ್ರಾಸ್, ೧೯೧೭.

'ಸೋರ್ಸೆಸ್ ಆಫ್ ವಿಜಯನಗರ ಹಿಸ್ಟರಿ', ಮದ್ರಾಸ್, ೧೯೧೯.

ಪಿ. ಬಿ. ದೇಸಾಯಿ : 'ಎ ಹಿಸ್ಟರಿ ಆಫ್ ಕರ್ನಾಟಕ, ಧಾರವಾಡ, ೧೯೭೦.

'ವಿಜಯನಗರ ಸಾಮ್ರಾಜ್ಯ', ಧಾರವಾಡ. ೧೯೬೯.

ಎ. ಕೃಷ್ಣಸ್ವಾಮಿ : 'ದಿ ತಮಿಳ್ ಕಂಟ್ರಿ ಅಂಡರ್ ವಿಜಯನಗರ', ಅಣ್ಣಾಮಲೈ ನಗರ, ೧೯೬೪

ಎ. ಎಚ್. ಲಾಂಗ್‌ಹರ್ಸ್ಟ್: 'ಹಂಪಿ ರೂಯಿನ್ಸ್ ಡಿಸ್ಕ್ರೈಬ್ಡ್ ಆಂಡ್ ಇಲ್ಲಸ್ಟ್ರೇಟೆಡ್', ಮದ್ರಾಸ್. ೧೯೧೭.

ಟಿ. ವಿ. ಮಹಾಲಿಂಗಂ : 'ಅಡ್ಮಿನಿಸ್ಟ್ರೇಶನ್ ಆಂಡ್ ಸೋಷಿಯಲ್ ಲೈಫ್ ಅಂಡರ ವಿಜಯನಗರ', ಮದ್ರಾಸ್, ೧೯೭೩

ಆರ್. ಎಸ್. ಮುಗಳಿ : 'ಕರ್ನಾಟಕ ಸಾಹಿತ್ಯ ಚರಿತ್ರೆ', ೧೯೫೩.

ಎಸ್. ರಾಜಶೇಖರ : 'ಕರ್ನಾಟಕ ಆರ್ಕಿಟೆಕ್ಚರ್', ಧಾರವಾಡ, ೧೯೮೫.

ಆರ್. ನರಸಿಂಹಾಚಾರ್: 'ಕರ್ನಾಟಕ ಕವಿಚರಿತೆ', ಸಂ. II ಬೆಂಗಳೂರು, ೧೯೭೩.

ಓ. ರಾಮಚಂದ್ರಯ್ಯ : 'ಸ್ಟಡೀಸ್ ಅನ್ ಕೃಷ್ಣದೇವರಾಯ ಆಫ್ ವಿಜಯನಗರ', ವಾಲ್ಟೇರ್, ೧೯೫೩.

ಎಂ, ರಾಮರಾವ್ : 'ಕೃಷ್ಣದೇವರಾಯ' ನ್ಯೂಡೆಲ್ಲಿ, ೧೯೭೧,

ಕೆ. ವಿ. ರಮೇಶ್ : 'ಎ ಹಿಸ್ಟರಿ ಆಫ್ ಕೆನರಾ', ಧಾರವಾಡ ೧೯೭೦,

ಸೂರ್ಯನಾರಾಯಣರಾವ್ : 'ಎ ಹಿಸ್ಟರಿ ಆಫ್ ವಿಜಯನಗರ ದಿ ನೆವ್ಹರ್ ಟು ಬಿ. ಫಾರ್‌ಗಾಟನ್ ಎಂಪಾಯರ್' ಮದ್ರಾಸ್, ೧೯೦೫.

ಬಿ. ಎ. ಸಾಲೆತ್ತೊರೆ :

'ಮಿಡೀವಲ್ ಜೈನಿಸಮ್ ವಿತ್ ಸ್ಪೆಶಲ್ ರೆಫರೆನ್ಸ ಟು ವಿಜಯನಗರ', ಬಾಂಬೆ, ೧೯೩೮.

'ಸೋಷಿಯಲ್ ಅಂಡ್ ಪೊಲಿಟಿಕಲ್ ಲೈಫ್ ಇನ್ ದಿ ವಿಜಯನಗರ ಎಂಪಾಯರ್,' (2 vols). ಮದ್ರಾಸ್, ೧೯೫೨.

ಕೆ. ಎ. ನೀಲಕಂಠಶಾಸ್ತ್ರಿ: 'ಎ ಹಿಸ್ಟರಿ ಆಫ್ ಸೌಥ್ ಇಂಡಿಯಾ',ಮದ್ರಾಸ್, ೧೯೫೮

ಕೆ. ಎ. ನೀಲಕಂಠಶಾಸ್ತ್ರಿ ಮತ್ತು ಎನ್. ವೆಂಕಟರಮಣಯ್ಯ :
'ಫರ್ದರ್ ಸೋರ್ಸಸ್ ಆಫ್ ವಿಜಯನಗರ ಹಿಸ್ಟರಿ', ಮದ್ರಾಸ್, ೧೯೪೬.

ರಾಬರ್ಟ್ ಸಿವೆಲ್ : 'ಎ ಫಾರ್‌ಗಾಟನ್ ಎಂಪಾಯರ್', ನ್ಯೂಡೆಲ್ಲಿ, ೧೯೬೮.

ಎಚ್. ಕೆ. ಷೇರ್ವಾನಿ : 'ದಿ ಬಹಮನೀಸ್ ಆಫ್ ದಿ ಡೆಕ್ಕನ್', ಹೈದರಾಬಾದ, ೧೯೬೪.

ಎಚ್. ಕೆ. ಸಿನ್ಹಾ : 'ಮಿಡೀವಲ್ ಹಿಸ್ಟರಿ ಆಫ್ ದಿ ಡೆಕ್ಕನ್', ಹೈದರಾಬಾದ, ೧೯೬೪.

ಎನ್. ವೆಂಕಟರಮಣಯ್ಯ : 'ದಿ ಅರ್ಲಿ ಮುಸ್ಲಿಮ್ ಎಕ್ಸ್‌ಪಾನ್ಶ್ಯನ್ ಇನ್ ದಿ ಡೆಕ್ಕನ್ ಆಂಡ ಸೌಥ ಇಂಡಿಯಾ', ಮದ್ರಾಸ್, ೧೯೪೨.
'ಓರಿಜಿನ್ ಆಫ್ ವಿಜಯನಗರ, ದಿ ಸಿಟಿ ಆಂಡ್ ದಿ ಎಂಪಾಯರ್', ಮದ್ರಾಸ್, ೧೯೩೩.
'ಸ್ಟಡೀಸ್ ಇನ್ ದಿ ಥರ್ಡ್ ಡೈನೆಸ್ಟಿ ಆಫ್ ವಿಜಯನಗರ', ಮದ್ರಾಸ್, ೧೯೩೫.

'ಎಪಿಗ್ರಾಫಿಯಾ ಕರ್ನಾಟಕ'ದ ಎಲ್ಲ ಸಂಪುಟಗಳು.
'ಎಫಿಗ್ರಾಫಿಯಾ ಇಂಡಿಕಾ'ದ ಎಲ್ಲ ಸಂಪುಟಗಳು.
'ಕರ್ನಾಟಕ ಇನ್ಸ್ಕೃಪ್ಶನ್ಸ'ದ ಎಲ್ಲ ಸಂಪುಟಗಳು
'ಜರ್ನಲ್ ಆಫ್ ಇಂಡಿಯನ್ ಹಿಸ್ಟರಿ' ಸಂಪುಟಗಳು.
'ಕ್ವಾರ್ಟರ್ಲಿ ಜರ್ನಲ್ ಆಫ್ ದಿ ಮಿಥಿಕ್ ಸೊಸೈಟಿ'ಯ ಸಂಪು
'ಕ್ವಾರ್ಟರ್ಲಿ ಜರ್ನಲ್ ಆಫ್ ದಿ ಆಂಧ್ರ ಹಿಸ್ಟಾರಿಕಲ್ ರಿಸರ್ಚ ಸೆ
ಸಂಪುಟಗಳು.
'ಸೌಥ್ ಇಂಡಿಯನ್ ಇನ್ಸ್ಕೃಪ್ಶನ್ಸ್'ದ ಸಂಪುಟಗಳು.



